

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೨ ಆಗಸ್ಟ್ ೨೦೦೬ ಸಂಚಿಕೆ ೮

ಸ್ವಾತಂತ್ರ್ಯೋತ್ಸವದ ಶುಭಾಶಯಗಳು



ಕೊಪ್ಪಳದಲ್ಲಿ ಜೂನ್ ೧೯ ರಂದು ಪರಮಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ನಡೆದ ಗುರುವಂದನಾ ಸಮಾರಂಭದ ಉದ್ಘಾಟನೆಯನ್ನು ಕೇಂದ್ರ ಯೋಜನಾ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರು ನೆರವೇರಿಸಿದರು. ಈ ಸಂದರ್ಭದಲ್ಲಿ ಮುಂಡರಗಿ ಶ್ರೀ ಶ್ರೀಗಳು, ಕೊಪ್ಪಳ ಶ್ರೀ ಶ್ರೀಗಳು, ಹೆಬ್ಬಾಳ ಶ್ರೀ ಶ್ರೀಗಳು, ಸುತ್ತೂರು ಶ್ರೀ ಶ್ರೀಗಳು, ಗಂಗಾವತಿ ಕಲ್ಮಠದ ಶ್ರೀ ಶ್ರೀಗಳು, ಸಂಸದ ಶ್ರೀ ಕೆ. ವಿರುಪಾಕ್ಷಪ್ಪ, ಶಾಸಕ ಶ್ರೀ ಜಿ. ವೀರಪ್ಪ, ಅ.ಭಾ.ವೀ. ಮಹಾಸಭಾದ ಕೊಪ್ಪಳ ಜಿಲ್ಲಾ ಘಟಕದ ಅಧ್ಯಕ್ಷ ಶ್ರೀ ಪರಣ್ಣ ಮುನವಳ್ಳಿ ಹಾಗೂ ಮಾಜಿ ವಿಧಾನ ಪರಿಷತ್ ಸದಸ್ಯ ಶ್ರೀ ಬಿ. ಮರಿಯಪ್ಪ ಅವರು ಉಪಸ್ಥಿತರಿದ್ದರು.




ಜೂನ್ ೧೩. ರಂದು ಮೈಸೂರಿನಲ್ಲಿ ಮೈಸೂರು ವೀರಶೈವ ಸಜ್ಜನ ಸಂಘದ ಆಶ್ರಯದಲ್ಲಿ ಪೂಜ್ಯ ಶ್ರೀ ಶ್ರೀಗಳವರ ಸಾನ್ನಿಧ್ಯದಲ್ಲಿ ಗುರುವಂದನಾ ಕಾರ್ಯಕ್ರಮ ನಡೆಯಿತು. ವೇದಿಕೆಯಲ್ಲಿ ಸುತ್ತೂರು ಜಗದ್ಗುರುಗಳು ಹಾಗೂ ಗಣ್ಯರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ಜುಲೈ ೨೮ ರಂದು ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ನಡೆದ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಬಸವರಾಜ ಹೊರಟ್ಟಿ, ಶ್ರೀ ಡಿ.ಹೆಚ್. ಶಂಕರಮೂರ್ತಿ ಹಾಗೂ ಡಾ॥ ಸಿ.ಎಸ್. ರಾಮಚಂದ್ರ ಅವರು ಉಪಸ್ಥಿತರಿದ್ದರು.




ಶ್ರೀಮಠದಲ್ಲಿ ನಡೆದ ಸಮಾರಂಭದಲ್ಲಿ ಲೋಕೋಪಯೋಗಿ ಸಚಿವ ಶ್ರೀ ಹೆಚ್.ಡಿ. ರೇವಣ್ಣನವರು ಹೈಮಾಸ್ಟ್ ಲ್ಯಾಂಪ್‌ನ್ನು ಉದ್ಘಾಟಿಸಿದ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು, ಸಚಿವರಾದ ಶ್ರೀ ಡಿ.ಎಚ್. ಶಂಕರಮೂರ್ತಿ, ಶ್ರೀ ಬಸವರಾಜ ಹೊರಟ್ಟಿಯವರು ಉಪಸ್ಥಿತರಿದ್ದರು.

ಸಂಪಾದಕ:
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ:
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ:
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೧೦೦೦/- |
| ಬಿಡಿ ಪ್ರತಿ | ರೂ. ೧೦.೦೦ |

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ

ಸಂಪುಟ : ೪೨ ಆಗಸ್ಟ್ ೨೦೦೬ ಸಂಚಿಕೆ : ೮

## ಒಳಪುಟಗಳಲ್ಲಿ ......................

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ಐದು ಬಣ್ಣದ ಗಿಡುವಿಂಗೆ ಇಪ್ಪತ್ತೈದು ಕೊನೆ ನೋಡಾ*
*ಅಲ್ಲಿ ಸುತ್ತಾಡುವಾತ ತಾನೊಬ್ಬನೆ ನೋಡಾ*
*ಐದು ಬಣ್ಣವಳಿದು ಇಪ್ಪತ್ತೈದು ಶಾಖೆ ಮುರಿಯಲು*
*ಅಲ್ಲಿ ಆಡುವಾತ ಸತ್ತನು, ಕೋಳು ಹೋಯಿತು*
*ನಿಮ್ಮವರಿಗೆ ನಿತ್ಯ ಲಿಂಗೈಕ್ಯ ಸಾಮ್ರಾಜ್ಯ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಪಂಚಭೂತ ಯುಕ್ತವಾದ ದೇಹಕ್ಕೆ ಇಪ್ಪತ್ತೈದು ತತ್ವಗಳೆ ಶಾಖೆಗಳು. ಐದು ಕ್ರಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಐದು ಪ್ರಾಣಾದಿ ವಾಯುಗಳು, ಐದು ಶಬ್ದಾದಿ ವಿಷಯಗಳು, ನಾಲ್ಕು ಚಿತ್ತ, ಮನ, ಬುದ್ಧಿ ಮತ್ತು ಅಹಂಕಾರಗಳು, ಮತ್ತು ಜೀವನು ಆ ದೇಹಭಾವವನ್ನು ಅಂಗೀಕರಿಸಿ ಹೃದಯಕಮಲದ ಅಧೋಮುಖವಾದ ಅಷ್ಟದಳಗುಣ ಪ್ರಕೃತಿವಿಡಿದು ಜೀವನು ವರ್ತಿಸುತ್ತಾನೆ. ಅಂತಹ ಜೀವನಿಗೆ ಸುಜ್ಞಾನೋದಯದಿಂದ ಪಂಚಭೂತಗಳು ಪಂಚಲಿಂಗಗಳ ಸ್ವರೂಪವನ್ನು ತಾಳಿ, ಇಪ್ಪತ್ತೈದು ತತ್ವಗಳು ಇಪ್ಪತ್ತೈದು ಮಂತ್ರಲಿಂಗ ಸ್ವರೂಪವಾಗಿ, ಸಜ್ಜೀವನ ಸದ್ರೂಪ ಬ್ರಹ್ಮವಾಗಿರುವುದು. ಅಂತಹ ಶಿವಸಾಮರಸ್ಯವುಳ್ಳ ಲಿಂಗೈಕ್ಯರು ಶಾಶ್ವತವಾಗಿ ಬೆಳಗಲ್ಪಟ್ಟ ಮಹಾಲಿಂಗದಲ್ಲಿ ಏಕತ್ವವೆಂಬ ಸಮ್ಯಗ್ ರಾಷ್ಟ್ರದ ಕರ್ತೃತ್ವ ಹಸ್ತಗತವಾಯಿತು. ಅಂತಹ ಪ್ರಾಣಲಿಂಗಸಂಬಂಧಿಗಳಾದ ಶರಣ ರು ನಿತ್ಯ ಲಿಂಗೈಕ್ಯ ಸಾಮ್ರಾಜ್ಯ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಿ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನೊಂದು ಬಂದವರಿಗೆ ತಾಯಾದೆ ಮಳೆಯಾದೆ
ನೆರಳಾದೆ ತುಂಬು ಮರವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೊಡ್ಡವರ ಸಣ್ಣತನಕೆ ಸಿಡಿವ ಸಿಡಿಲಾದೆ ನೀ
ಸಣ್ಣವರ ಹಿರಿತನಕೆ ಬೆರಗಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಪ್ಪಿಟ್ಟ ನೆಲಕಂಡು ಕಳವಳಿಸಿ ಕರಗಿದೆ
ಹೆಪ್ಪಿಟ್ಟ ಬದುಕಿಗೆ ಮಂತಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗೋಳಿಡುವ ಜೋಪಡಿಯ ಕಣ್ಣೀರನೊರಸಿದೆ
ಕವಿದ ಕತ್ತಲೆಗೆ ಹಗೆಯಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೇರಾದೆ ಬಲವಾದೆ ಬೆವರ ಬಂಧುಗಳಿಗೆ
ತೇರಾದೆ ಹೊಳೆಯಾದೆ ಅರಿತವರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪುರುಷ ಪುಣ್ಯ ರೂಪ ಹರುಷ ಪವಿತ್ರವೆ
ಗುರುಕುಲದ ಮಾಣಿಕ್ಯ ಚರಿತವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೀರವೈರಾಗ್ಯವೆ ಸಾರವಿವೇಕವೆ
ಧೀರ ಧೀಮಂತ ತೇಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪುಣ್ಯಚರಿತವಾದೆ ಶರಣಪುರಾಣವಾದೆ
ಶರಣಲೀಲಾಮೃತ ಮಣಿಯಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕ ಶಿಕ್ಷಕ ಗುರುವೆ ಲೋಕ ಮಂಗಳರೂಪಿ
ಲೋಕ ಕಲ್ಯಾಣಕೆ ಶ್ರಮಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವೆ ಗುರುವಾಗಿರುವ ಗುರುವೆ ಅರಿವಾಗಿರುವ
ಅರಿವಿನರಿವಾಗಿರುವ ಶಿವಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭೂಮಿಯಾಭರಣವೆ ಬಾನಿನ ಶಿವತನೆಯೆ
ಭಕ್ತಿಯ ಸಿರಿತೊರೆಯೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಪ್ರಗತಿ

*ಇಂದು ಟಿ.ವಿ. ಇಲ್ಲದ ಮನೆಯಿಲ್ಲ. ಮೊಬೈಲ್‌ಗಳಿಲ್ಲದ ಕೈಗಳಿಲ್ಲ. ಕಂಪ್ಯೂಟರ್‌ಗಳಿಲ್ಲದ ಶಾಲಾ ಕಾಲೇಜುಗಳಿಲ್ಲ. ದ್ವಿಚಕ್ರವಾಹನಗಳಿರದ ಗ್ರಾಮಗಳಿಲ್ಲ. ಇವೆಲ್ಲ ಬೌದ್ಧಿಕ ಪ್ರಗತಿಯ ಹೆಜ್ಜೆಗಳಾಗಿರುವುದು ನಿಜ. ಭೌತಿಕ ಪ್ರಗತಿಯೂ ಗಣನೀಯವಾಗಿ ಸುಧಾರಿಸಿದೆ. ಸೇತುವೆಗಳ, ಅಣೆಕಟ್ಟೆಗಳು, ರಸ್ತೆಗಳು, ಭವ್ಯ ಕಟ್ಟಡಗಳು, ಎದ್ದು ಕಾಣುತ್ತಿವೆ. ನಿಮಿಷ ನಿಮಿಷಾರ್ಧದಲ್ಲಿ ಜಗತ್ತನ್ನೇ ಸುತ್ತಾಡಿಬರಬಹುದಾಗಿದೆ. ನೂರು ಜನರ ಕೆಲಸವನ್ನು ಒಂದು ಜೆಸಿಬಿ ಯಂತ್ರ ಮಾಡಬಲ್ಲುದಾಗಿದೆ. ನಿಜ ಇವೆಲ್ಲವೂ ನಿಜ. ಆದರೆ ಮನುಷ್ಯ ನಿಜವಾದ ಪ್ರಗತಿಯನ್ನು ಕಂಡಿದ್ದಾನೆಯೇ? ಯೋಚಿಸಿದಾಗ ನಿರುತ್ತರವೇ ಎದುರಾಗುತ್ತದೆ.*

*ಮನುಷ್ಯ ಮನುಷ್ಯನಾಗಿ ಬಾಳುವ ಕಲೆಯನ್ನು ಕಲಿತಿದ್ದಾನೆಯೇ? ರಾಕ್ಷಸನಾಗಿ, ಪ್ರಾಣಿಯಾಗಿ, ಪಶುವಾಗಿ ಜೀವಿಸುತ್ತಿದ್ದಾನೆ. ಜನರನ್ನು ಮರೆತು ಬಾಳುವ ವರ್ಗ ಒಂದಾದರೆ, ಜನ ಮರೆಯಲಾರದಂತೆ ಬಾಳುವ ವರ್ಗ ಮತ್ತೊಂದಿದೆ. ಜನ ಸ್ಮರಿಸುವಂಥ ಜನ ವರ್ಗ ಬೆಳೆಯಬೇಕು. ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ ಅಹಂಕಾರ ಮತ್ತರಾಗಿ ಮೆರೆದ ಚಕ್ರವರ್ತಿಗಳು, ಅವರು ಕಟ್ಟಿದ ಚಕ್ರಾಧಿಪತ್ಯಗಳು ಇಂದು ಮಣ್ಣಾಗಿ ಹೋಗಿವೆ. ಆದರೆ ಜನ ಬದುಕಲು ಮಹಾನುಭಾವರು ಕೊಟ್ಟ ಒಂದು ಮಹಾ ಭಾಗ್ಯವಿದೆ. ಅದೇ 'ಧರ್ಮ'ವೆಂಬುದಾಗಿದೆ. ಅವರು ಕೊಟ್ಟದ್ದು ಮಾನವ ಧರ್ಮವನ್ನಷ್ಟೇ ಅಲ್ಲ 'ಸಕಲ ಜೀವರಿಗೆ ಲೇಸನ್ನೇ ಬಯಸುವ 'ವಿಶಾಲಧರ್ಮವನ್ನು'.*

*ಮಠಗಳು ಜನತೆಯನ್ನು ಧರ್ಮಮುಖಿಯನ್ನಾಗಿ ಪ್ರವರ್ತನಗೊಳಿಸಲು ಸಂಸ್ಥಾಪಿತವಾದ ಕಾರ್ಯಾಲಯಗಳು. ಅವು ಅಹಂಕಾರ ಮಮಕಾರ ಮುಕ್ತವಾದ ಮಂಗಳ ಕೇಂದ್ರಗಳು. ನ್ಯಾಯಾನ್ಯಾಯಗಳನ್ನು ವಿಮರ್ಶಿಸುವ ನ್ಯಾಯಾಲಯಗಳು. ಶಿಲ್ಪಾದಿ ಸಂಗೀತ ಸಾಹಿತ್ಯ ಕಲಾದೇಗುಲಗಳು. ಸಾಮಾಜಿಕ ಆರೋಗ್ಯವನ್ನು ಕಾಪಾಡಿಕೊಂಡು ಬರುವ ಆಸ್ಪತ್ರೆಗಳು, ನೈತಿಕ ಸಂಪತ್ತನ್ನು ವೃದ್ಧಿಸುವ ಬ್ಯಾಂಕುಗಳು, ಆತ್ಮವಿಕಾಸಕ್ಕೆ ಅನುವಾಗುವ ದಿವ್ಯಾರಾಮಗಳು. ಧರ್ಮದ ದೀವಿಗೆಗೆ ಎಣ್ಣೆ ಬತ್ತಿಗಳನ್ನು ಹಾಕಿ ನಂದದಂತೆ ನೋಡಿ ಕೊಳ್ಳುವ ಜಾಗೃತ ಸ್ಥಾನಗಳು, ವಿದ್ಯಾಕ್ಷೇತ್ರಗಳು, ಮುಂತಾಗಿ ಬೆಳೆದು ಬಂದ 'ಇಲ್ಲಿ-ಅಲ್ಲಿ ಸಲ್ಲುವ' ಮಾನವರನ್ನು ರೂಪಿಸುವ ಕಮ್ಮಟಗಳು.*

*ಮಠಗಳಿಗೆ ಸ್ವಾಮಿಗಳಾಗಿ ಬರುವವರು ತುಂಬಾ ಎಚ್ಚರವಿರಬೇಕು. ಸಂಯಮದ ಸದ್ಗುಣಿಗಳಾಗಿರಬೇಕು. ಚಾರಿತ್ರ್ಯಶುದ್ಧಿಯ ನಿಧಿಗಳಾಗಿರಬೇಕು. ಕಾವಿ ಲಾಂಛನ ಸುಲಭವಾದದ್ದಲ್ಲ. ಕಾವಿ ಕಾಮಸಹಸ್ರರೂಪಗಳನ್ನು ಸುಡುವ ಅಗ್ನಿ. ವ್ಯಕ್ತಿತ್ವ ವಿಕಾಸ, ಸಾಮಾಜಿಕ ಸಂಪರ್ಕಕ್ಕಾಗಿ ಸಾಧನೆ ಮಾಡುವುದು ಅಗತ್ಯ. ಸ್ವಾಮಿಗಳಾದವರು ಕಾಯ ವಿಕಾರ, ಇಂದ್ರಿಯ ವಿಕಾರ, ಮನೋವಿಕಾರಗಳನ್ನು ಗೆಲ್ಲಬೇಕು. ಆಚಾರ-ವಿಚಾರ ಶುದ್ಧರಾಗಿ, ಅಧ್ಯಯನ, ಪ್ರವಚನಗಳ ಮೂಲಕ ಸ್ಥಾನ-ಮಾನಗಳನ್ನುಳಿಸಿಕೊಳ್ಳುವ ತಪಸ್ಸು ಅವರದಾಗಬೇಕು. ಬಾಹ್ಯದ ಪ್ರಗತಿಗಿಂತ ಅಂತರಂಗದ ಪ್ರಗತಿಯನ್ನು ಸಾಧಿಸುವ 'ಛಲ' ಸ್ವಾಮಿಗಳಾದವರಿಗಿರಬೇಕು. ಲೋಕದ ಬಾಯಿಗೆ ಕವಳವಾಗಬಾರದು, ಬಾಯಿ ತೊಳೆದುಕೊಂಡು ಜನ ಮಾತಾಡುವಂತಹ ಪವಿತ್ರ ಜೀವನಯೋಗಿಗಳಾಗಬೇಕು.*

*(೩೦-೦೭-೨೦೦೬ರಂದು ಹರಳೂರು- ಜಂಗಮ ಮಠ ಪ್ರಾರಂಭೋತ್ಸವದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)*

## ಸಂಪಾದಕೀಯ

ದಿನಾಂಕ ೧೯-೦೬-೨೦೦೬, ಕೊಪ್ಪಳ ಜಿಲ್ಲೆ, ಗಂಗಾವತಿಯಲ್ಲಿ ಶ್ರೀ ಕ್ಷೇತ್ರ ಸಿದ್ಧಗಂಗೆಯ ದೈವತತ್ವದ ಸಾಕಾರವಾದ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮೀಜಿಯವರ ೯೯ನೆಯ ಜನ್ಮ ದಿನಾಚರಣೆ ಗುರುವಂದನ ಸಮಾರಂಭ. 'ಭತ್ತದ ನೆಲದಲ್ಲಿ ಜೀವಂತ ದೇವರಿಗೆ' ಭಕ್ತಿ ಸಮರ್ಪಣೆ. ವೀರಶೈವ ಸಮಾಜ ಮತ್ತು ಶ್ರೀ ಮಠದ ಹಳೆಯ ವಿದ್ಯಾರ್ಥಿಗಳ ಸಹಯೋಗ, ಅಪಾರ ಜನಸ್ತೋಮ, ಮಂಗಳ ಕುಂಭ ಕಲಶಗಳ ಸೊಬಗು. ಹರಗುರು ಚರಮೂರ್ತಿಗಳ ದರ್ಶನ ಭಾಗ್ಯ. ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶಿವಾರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯ ಅಧ್ಯಕ್ಷತೆ, ಮುಂಡರಗಿ ಪೂಜ್ಯ ಶ್ರೀಗಳವರ ದಿವ್ಯ ಸಾನ್ನಿಧ್ಯ, ಕೊಪ್ಪಳದ ಗವಿಸಿದ್ದೇಶ್ವರ ಪೂಜ್ಯ ಶ್ರೀಗಳವರ, ಕೊಟ್ಟೂರು ಪೂಜ್ಯ ಶ್ರೀಗಳವರ ದಿವ್ಯ ಉಪಸ್ಥಿತಿ, ಶಾಸಕ ಶ್ರೀ ಕೆ. ವಿರೂಪಾಕ್ಷಪ್ಪ, ಶಾಸಕ ಶ್ರೀ ಜಿ. ವೀರಪ್ಪ, ಸಮಿತಿಯ ಅಧ್ಯಕ್ಷ ಶ್ರೀ ಪರಪ್ಪ ಮನವಳ್ಳಿ, ಕೇಂದ್ರ ಸರ್ಕಾರದ ಯೋಜನಾ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್, ಸಿದ್ಧಗಂಗಾ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಶ್ರೀ ಹೆಚ್.ವಿ. ವೀರಭದ್ರಯ್ಯನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

'ಸಿದ್ಧಗಂಗಾ ಶ್ರೀಗಳು ಗ್ರಾಮೀಣ ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಶ್ರಮಿಸಿದ ಹರಿಕಾರರು'– ಎಂದು ಕೇಂದ್ರ ಸರ್ಕಾರದ ಯೋಜನಾ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಮುಕ್ತ ಕಂಠದಿಂದ ಶ್ರೀಗಳವರ ಸೇವೆಯನ್ನು ಪ್ರಶಂಸಿದರು. 'ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಮಠಗಳು ಅಭಿವೃದ್ಧಿಯ ದೃಷ್ಟಿಯಿಂದ ಹಿಂದುಳಿದಿವೆ. ಅದೇ ಹಳೇ ಮೈಸೂರು ಮತ್ತು ದಕ್ಷಿಣ ಭಾಗದಲ್ಲಿ ಅಲ್ಲಿನ ಸಾಮಾಜಿಕ ಜೀವನ ಹಾಗೂ ಶೈಕ್ಷಣಿಕ ಕ್ಷೇತ್ರವನ್ನು ಮಠಗಳು ಅಭಿವೃದ್ಧಿಪಡಿಸಿವೆ. ಇದಕ್ಕೆ ಈ ಭಾಗದ ಜನರು ಕಾರಣವಾಗಿರಬಹುದು. ಈ ಭಾಗದ ಮಠಾಧೀಶರ ನಿರಾಸಕ್ತಿಯೂ ಕಾರಣವಾಗಿರಬಹುದು' ಎಂದು ಸಂಸದ ಶ್ರೀ ವಿರುಪಾಕ್ಷಪ್ಪನವರು ನುಡಿದರು. ಅಖಿಲ ಭಾರತ ವೀರಶೈವ ಮಹಾಸಭೆಯ ರಾಜ್ಯಾಧ್ಯಕ್ಷ ಶ್ರೀ ಎಸ್.ಎಸ್. ಪಾವಟೆಯವರು 'ವೀರಶೈವರ ಒಳಜಗಳ ನಿಲ್ಲಬೇಕೆಂದು' ಹೇಳಿದರು. ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಮಾತನಾಡುತ್ತ ದಿನಾಂಕ ೦೧-೦೪-೧೯೦೮ರಂದು ಬೆಂಗಳೂರು ಜಿಲ್ಲೆ, ಮಾಗಡಿ ತಾಲ್ಲೂಕು ವೀರಾಪುರದ ಪುಟ್ಟಗ್ರಾಮದಲ್ಲಿ ಜನಿಸಿದ ಶ್ರೀ ಶಿವಣ್ಣನವರು ದಿನಾಂಕ ೦೩-೦೩-೧೯೩೦ರಂದು ಶ್ರೀ ಸಿದ್ಧಗಂಗಾ ಮಠದ ಪೂಜ್ಯ ಶ್ರೀ ಉದ್ದಾನಮಹಾ ಸ್ವಾಮಿಗಳವರ ಉತ್ತರಾಧಿಕಾರಿಯಾಗಿ ನಿಯೋಜಿತರಾಗಿ ೧೧-೦೧-೧೯೪೧ರಂದು ಶ್ರೀಮಠದ ಅಧ್ಯಕ್ಷರಾಗಿ ಲೋಕಾರ್ಪಣ ಮಾಡಿಕೊಂಡು ಬಂದವರಾಗಿದ್ದಾರೆ. ತಮ್ಮ ಸೇವಾಜೀವನದುದ್ದಕ್ಕೂ ಬಸವತತ್ವಗಳ ಪ್ರಯೋಗಶಾಲೆಯನ್ನಾಗಿಸುತ್ತ ಶ್ರೀಮಠವನ್ನು 'ನಭೂತೋ' ಎಂಬಂತೆ ಕಟ್ಟಿ ಬೆಳೆಸಿದ ಕಾರಣಪುರುಷರಾಗಿದ್ದಾರೆ. ಗುರು, ಲಿಂಗ, ಜಂಗಮ, ಆಚಾರ, ಪ್ರಸಾದಗಳೆಂಬ ಪಂಚ ಬ್ರಹ್ಮಗಳನ್ನು ಎಂಟುಸಾವಿರ ಮಕ್ಕಳ ಮನಸ್ತಂಭ ಹೊಲದಲ್ಲಿ ಬಿತ್ತಿ ಬೆಳೆಯುತ್ತಿರುವ ನಿತ್ಯ ನೂತನ, ದೇವಕೃಷಿಕರಾಗಿದ್ದಾರೆ ಎಂದು ಉಪನ್ಯಾಸ ನೀಡಿದರು. ಸಭೆಯಲ್ಲಿ ಪರಣ್ಣ ಮುನವಳ್ಳಿ ಸ್ವಾಗತಿಸಿದರು. ಮುಂಡರಗಿ ಶ್ರೀಗಳು ಆಶೀರ್ವಚನ ನೀಡಿದರು. ಕೊಪ್ಪಳದ ಶ್ರೀಗಳು ಸಿದ್ಧಗಂಗಾ ಶ್ರೀಗಳವರನ್ನು ತಮ್ಮ ಲಿಂಗನುಡಿಗಳಿಂದ ಅಲಂಕರಿಸಿದರು. ಸುತ್ತೂರು ಜಗದ್ಗುರುಗಳವರು ಕಾಯಕ-ದಾಸೋಹದ ಪ್ರತಿರೂಪವೇ ಸಿದ್ಧಗಂಗಾ ಶ್ರೀಗಳವರೆಂದು ನುಡಿದರು.

ಪರಮಪೂಜ್ಯ ಶ್ರೀಶ್ರೀಗಳವರು 'ಮಾನವನ ಏಕಮುಖಪ್ರಗತಿಯಿಂದ ದೇಶಕ್ಕೆ ಒಳಿತಾಗದು' –ಮಾನವ ಧರ್ಮದ ಆಚರಣೆಗೆ ಬರಬೇಕು ಎನ್ನುತ್ತ 'ಮಾನವ ಇಂದಿನ ದಿನಮಾನದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿರಬಹುದು. ಆದರೆ ದೇಶದಲ್ಲಿ ಬಡತನ ಇನ್ನೂ ಜೀವಂತವಾಗಿದೆ. ಕೇವಲ ಕೆಲವೇ ಕೆಲವರು ಆರ್ಥಿಕವಾಗಿ ಸದೃಢರಾದರೆ ಸಾಲದು. ಬದಲಿಗೆ ಇಡೀ ಸಮಾಜವನ್ನು ಆರ್ಥಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕವಾಗಿ ಸದೃಢಗೊಳಿಸಬೇಕಾದ ಅಗತ್ಯವಿದೆ. ಈ ದಿಶೆಯಲ್ಲಿ ಬಸವಣ್ಣನವರ ತತ್ವಾದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅಂತರಿಕವಾಗಿ ಮಾನವ ಪ್ರಗತಿಕಂಡಾಗ ಮಾತ್ರ ಅದನ್ನು ನಿಜವಾದ ಪ್ರಗತಿಯೆಂದು ಒಪ್ಪಿಕೊಳ್ಳಬಹುದೆಂದೂ ಅಂಥ ಪ್ರಗತಿಯ ಅವಶ್ಯಕತೆ ಮಾನವನಿಗಿದೆಯೆಂದೂ ನುಡಿದರು.

ಸಮಾರಂಭದ ಅಂಗವಾಗಿ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕವನ್ನು ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರು ಪ್ರದರ್ಶಿಸಿದ್ದು ಭಕ್ತಾದಿಗಳಿಗೆ ಅಪಾರ ಸಂತೋಷವನ್ನುಂಟುಮಾಡಿತು.

ಗಂಗಾವತಿಯ ವೀರಶೈವ ಸಮಾಜದ ಬಂಧುಗಳು ಮತ್ತು ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ನಿವೇದಿತಾ ಪ್ರೌಢಶಾಲೆಯ ಬಂಧುಗಳು ಶ್ರೀ ಸಿದ್ಧಗಂಗಾ ಮಠದ ದಾಸೋಹ ಮಣಿಹಕ್ಕೆ ೨ ಲಾರಿ ತುಂಬಾ ಸೋನಾಮಸೂರಿ ಅಕ್ಕಿಯನ್ನು ಕಳುಹಿಸಿಕೊಡುವುದರ ಮೂಲಕ ತಮ್ಮ ಭಕ್ತಿಯನ್ನು ಸಮರ್ಪಿಸುವಲ್ಲಿ ಸಂತೋಷ ವನ್ನನುಭವಿಸಿದ್ದು ಸ್ಮರಣೀಯವಾಯಿತು.

–ಸಂಪಾದಕ



## ಸಂಪಾದಕೀಯ

### ಗುರುವಂದನ– ತಾಳಿಕೋಟೆ – ಶ್ರೀ ಎ.ಎಸ್. ಪಾಟೀಲ(ನಡಹಳ್ಳಿ)

ದಿನಾಂಕ ೧೭-೦೭-೨೦೦೬ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ತಾಳಿಕೋಟೆಯಲ್ಲಿ ಸಂಭ್ರಮ ಸಡಗರಗಳ ಅದ್ಭುತ ಸಮಾವೇಶ. ಜನಸಾಗರದ ಹೃನ್ಮನ ತುಂಬಿದ ಅಪರೂಪದ ದೃಶ್ಯ. ನೋಡುವ ಕಣ್ಣುಗಳಿಗೆ ಹಬ್ಬ. ಎಲ್ಲೆಲ್ಲಿಂದಲೋ ಹರಿದು ಬಂದ ವಾಹನಗಳು. ಅವೂ ಸಾವಿರ ಸಾವಿರ ಸಂಖ್ಯೆಯಲ್ಲಿ. ಶ್ರೀ ಖಾಸ್ಗತೇಶ್ವರ ಕಾಲೇಜು ಮೈದಾನ ಪುಣ್ಯ ಮಾಡಿತ್ತು. ಶರಣರು ಮೆಟ್ಟಿದ ಧರೆ ಪಾವನವೆಂಬಂತೆ ಹರಗುರುಚರಮೂರ್ತಿಗಳ ಶಿವಚರಣಗಳಿಂದ, ಶ್ರಮಿಕ ಸಂಸ್ಕೃತಿಯ ಅನುಯಾಯಿಗಳಿಂದ, ಜನ ಪ್ರತಿನಿಧಿಗಳ ಸಮೂಹದಿಂದ ಬಯಲು ರೂಪುಗೊಂಡಿತ್ತು. ಲಕ್ಷ ಲಕ್ಷ ಜನರ ಬೃಹತ್ ಸಮಾವೇಶವಾದರೂ ಶಿಸ್ತು ಸಂಯಮಗಳ ಸುಸಂಸ್ಕೃತ ಸಮಾರಂಭವಾಗಿತ್ತು.

ಸಮಾರಂಭದ ಕೇಂದ್ರ ಬಿಂದು ಶ್ರೀ ಸಿದ್ಧಗಂಗಾ ಮಠದ ಸೇವಾ ದಿಗಂತವನ್ನು ದಕ್ಷಿಣೋತ್ತರವಾಗಿ ವಿಸ್ತರಿಸಿದ ಕಾರಣಿಕ ವಿಭೂತಿ ಚೇತನರಾದ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಪೂಜ್ಯಪಾದರ ೯೯ನೇ ಜನ್ಮದಿನಾಚರಣೆ. ಸಮಾರಂಭದ ನೇತೃತ್ವ ಶ್ರೀ ಎ.ಎಸ್. ಪಾಟೀಲ(ನಡಹಳ್ಳಿ) ಅವರದು. ಶ್ರೀ ಪಾಟೀಲರ ಗುರುಭಕ್ತಿ ಅನನ್ಯ ; ಅಸದೃಶವೆನಿಸ್ತು. ಶ್ರೀ ಮಠದ ಹಳೆಯ ವಿದ್ಯಾರ್ಥಿಯಾದ ಶ್ರೀ ಪಾಟೀಲರಿಗೆ ಶ್ರೀಗಳವರು ಶ್ರೀಮಠದಲ್ಲಿ ದಿನನಿತ್ಯದ ಪ್ರಾರ್ಥನಾ ಸಭೆಯಲ್ಲಿ ನೀಡುತ್ತಿದ್ದ 'ಉಣ್ಣುವ ಪ್ರತಿ ತುತ್ತು ಅನ್ನದ ಹಿಂದೆ ಸಾವಿರಾರು ಜನರ ಪರಿಶ್ರಮ ಎದೆ ಎಂಬುದನ್ನು ಮರೆಯಬೇಡ. ಮುಂದೊಂದು ದಿನ ನೀನು ಪಡೆದ ವಿದ್ಯೆ ಪರಿಶ್ರಮದಿಂದ ಶ್ರೀಮಂತಿಕೆ ಬಂದರೆ ದಾನ ಮಾಡು, ಅಧಿಕಾರ ಬಂದರೆ ಪ್ರಾಮಾಣಿಕ ಸೇವೆ ಮಾಡು' ಎಂಬ ನುಡಿಗಳು ಸಮಾಜರೂಪಿ ಜಂಗಮಕ್ಕೆ ಸೇವೆ ಮಾಡುವ ಮನಸ್ಸನ್ನು ರೂಪಿಸಿದುವು. ಶ್ರೀ ಪಾಟೀಲರಿಂದು ಶ್ರೀಮಂತರು ಹಣದಲ್ಲಿ ಮಾತ್ರವಲ್ಲ; ಹೃದಯ ಶ್ರೀಮಂತಿಕೆಯಲ್ಲಿ ಅವರು ತುಳಿದಿರುವ ದಾರಿ ಗುರು ತೋರಿದ ಸತ್ಪಥ, ಬಿಜಾಪುರ ಜಿಲ್ಲೆಯಾದ್ಯಂತ ಶ್ರೀ ಪಾಟೀಲರಿಂದು ಮನೆಮಾತು ಆಗಿದ್ದಾರೆ. 'ಆಗಿದ್ದಾರೆ' ಮಾಡಿದವರಲ್ಲ, ಸ್ವಸಾಮರ್ಥ್ಯದ ಏಣಿ ಏರಿದವರಾಗಿ ವಿನಯ ಸೌಜನ್ಯಗಳ ಗಣಿಯದಣಿಯಾಗಿದ್ದಾರೆ.

ತಾಳಿಕೋಟೆ ಸಂಭ್ರಮಿಸಿತು. ಹೆಲಿಕ್ಯಾಪ್ಟರ್ ಕಂಡು ಕುಣಿದಾಡಿತು. ೯೯ರ ತಪೋನಿಧಿಯಾದ ದಾಸೋಹ ಸಾರ್ವಭೌಮ ಶ್ರೀಗಳಿಗೆ ಹಣೆಮಣಿದು ಹರ್ಷೋದ್ಗಾರ ಮಾಡಿತು. ಸಭಾವೇದಿಕೆ ಗದಗಿನ ಶ್ರೀ ತೋಂಟದಾರ್ಯ ಸಂಸ್ಥಾನ ಮಠದ ಜಗದ್ಗುರು ಪೂಜ್ಯ ಶ್ರೀಗಳವರ, ಇಲಕಲ್ಲಿನ ಬಸವನಾಣ್ಯ ಚಿತ್ತರಗಿ ವಿಜಯಮಹಾಂತೇಶ್ವರ ಮಠದ ಪೂಜ್ಯ ಶ್ರೀ ಮಹಾಂತಪ್ಪಗಳ, ಕೊಪ್ಪಳದ ಪೂಜ್ಯಶ್ರೀಗಳ ಧಾರವಾಡದ ಶ್ರೀ ಮುರುಘಾಮಠದ ಪೂಜ್ಯ ಶ್ರೀಗಳ, ಅಥಣಿ ಶ್ರೀ ಮೋಟಗಿ ಮಠದ ಪೂಜ್ಯ ಶ್ರೀಗಳ, ತಾಳಿಕೋಟೆ ಶ್ರೀ ಖಾಸ್ಗತೇಶ್ವರ ಪೂಜ್ಯ ಶ್ರೀಗಳ, ಬೈಲೂರಿನ ಶ್ರೀ ನಿಷ್ಕಲ ಮಂಟಪದ ಪೂಜ್ಯಶ್ರೀಗಳ ಹಾಗೂ ವಿವಿಧ ಮಠಾಧೀಶರ ಮತ್ತು ಶಾಸಕರ, ಗಣ್ಯಮಾನ್ಯರ ಉಪಸ್ಥಿತಿಯಿಂದ ರಾಮಣೀಯಕವಾಗಿ ಮಹಾಜನತೆಯ ಕಣ್ಮನವನ್ನು ಸೂರೆಗೊಂಡಿದ್ದು ವಿಶೇಷವೆನಿಸಿತು.

ಪರಮಪೂಜ್ಯ ಶ್ರೀ ಶ್ರೀಗಳವರನ್ನು ಎ.ಎಸ್. ಪಾಟೀಲ(ನಡಹಳ್ಳಿ?) ಯುವಕ ಸಂಘದವರಿಂದ ಬಸವನಾಣ್ಯಗಳಿಂದ ತುಲಾಭಾರ ಮೂಲಕ ಭಕ್ತಿ ಸಮರ್ಪಣೆ ಮಾಡಲಾಯಿತು. ಶ್ರೀ ಪಾಟೀಲರು ತಮ್ಮ ಕುಟುಂಬದವರ ಪರವಾಗಿ ಒಂದು ಕೆ.ಜಿ. ತೂಕದ ಚಿನ್ನದ ಪ್ರಸಾದ ತಟ್ಟೆಯನ್ನು ಶ್ರೀಗಳವರಿಗೆ ಅರ್ಪಿಸಿ ಧನ್ಯತೆಯನ್ನನುಭವಿಸಿದ್ದು ಅವಿಸ್ಮರಣೀಯ ವಾಯಿತು. ಇಡೀ ಕಾರ್ಯಕ್ರಮಕ್ಕೆ ಕಿರೀಟವಿಟ್ಟಂತಾಯಿತು. ಭಕ್ತಿ ಬಂಗಾರವೆನಿಸಿತು. ಪಾಟೀಲರ ಅಸೀಮಸಂಘಟನಾ ಸಾಮರ್ಥ್ಯ ಎಲ್ಲರ ಬಾಯಲ್ಲಿ ದಳದಳವಾಗಿ ಅರಳಿತ್ತು. ಕಡುಬಡತನದಿಂದ ಮೇಲೆ ಬಂದ ಶ್ರೀ ಪಾಟೀಲರಿಗೆ ಗುರುಕರುಣೆ ಸಾಸುವೆಯ ಮೇಲೆ ಸಾಗರ ಹರಿದಂತೆಂಬುದು ಸಾಕಾರಗೊಂಡಂತಾಗಿತ್ತು.

ಸಮಯದ ಅಭಾವವನ್ನರಿತ ಗದುಗಿನ ಹಾಗೂ ಇಳಕಲ್ಲಿನ ಶ್ರೀಗಳವರು ಸಮಯ ದಾನ ಮಾಡಿ ಪರಮಪೂಜ್ಯ ಶ್ರೀಗಳವರ ಆಶೀರ್ವಚನಕ್ಕೆ ಅವಕಾಶ ಕಲ್ಪಿಸಿದ್ದು 'ಮರದನೆಳಲೊಳಗಿದ್ದು ತನ್ನ ನೆರಳನರಸಬಹುದೇ' ಎಂಬ ವಚನಕ್ಕೆ ಭಾಷ್ಯ ಬರೆದಂತಿತ್ತು. ಗೌರವಕ್ಕೆ ಗೌರವ ಬೆರೆತ ಕಲ್ಯಾಣವೆನಿಸಿತು. ಸನ್ಮಾನ, ಪ್ರತಿಭಾ ಪುರಸ್ಕಾರಗಳು ಆಯೋಜಿತವಾಗಿದ್ದು ಸೂಕ್ತವಾಯಿತು. ನಿವೃತ್ತ ಪ್ರಾಧ್ಯಾಪಕ ಶ್ರೀ ಹಿರೇಮಠ ಮಾತುಗಳು ಮನನೀಯವಾದುವು. ಲಕ್ಷ ಲಕ್ಷ ಬಾಯಿಗಳಿಗೆ ಕಿಂಚಿತ್ತೂ ತೊಂದರೆಯಾಗದಂತೆ ಪ್ರಸಾದ ವ್ಯವಸ್ಥೆ ಅಚ್ಚುಕಟ್ಟಾಗಿ ರಕ್ಷಣಾದಳದ ಸಹಕಾರದೊಡನೆ ಏರ್ಪಾಡಾಗಿತ್ತು. ಸಡಗರಗಳ ಅದ್ಭುತ ಸಮಾವೇಶ. ಜನಸಾಗರದ ಹೃನ್ಮನ ತುಂಬಿದ ಅಪರೂಪದ ದೃಶ್ಯ ನೋಡುವ ಕಣ್ಣುಗಳಿಗೆ ಹಬ್ಬ.

ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಚನಕ್ಕೆ ಬೃಹತ್ ಜನಸ್ತೋಮ ಮೈಯೆಲ್ಲಾ ಕಿವಿಯಾಗಿ ಸಹಕರಿಸಿತು. ಸೂಜಿ ಬಿದ್ದರೆ ಸದ್ದಾಗುವಂತಿತ್ತು ಸಭೆ. ತಾಳಿಕೋಟೆಯ ಭಾಗ್ಯ, ಶ್ರೀ ಪಾಟೀಲರ ಸೇವೆ ಮರೆಯಲಾಗದ ಅನುಭವಗಳಾದುವು.

.... ಮುಂದುವರೆದಿದೆ

# ಶ್ರಾವಣ ಮಾಸದ ವೈಶಿಷ್ಟ್ಯ

–ವ್ಹಿ.ಸಿ. ಅಂದಾನಿ, ಮನೆ ನಂ.1314, ಬಣಗಾರಗಲ್ಲಿ, ಗೋಕಾಕ, ಬೆಳಗಾಂವ ಜಿಲ್ಲೆ.

ಶ್ರಾವಣಮಾಸವು ಅರಣ್ಯ ಸಂಪತ್ತನ್ನು ವರ್ಣಮಯ ನಿಸರ್ಗ ಸಂಪತ್ತನ್ನು ಎಲ್ಲ ಜೀವರಾಶಿಗಳಿಗೆ ಜೀವನಾಧಾರವನ್ನು ಒದಗಿಸುವುದಲ್ಲದೆ ಮಾನವನ ಆಧ್ಯಾತ್ಮಿಕ ಸಂಪತ್ತಿನ ಕಡೆಗೆ ಒಯ್ಯುವ ಧರ್ಮ ಮಾಸವು. ಮನೆಗಳಲ್ಲಿ ಸಡಗರದ ಪೂಜೆ ಮನದಲ್ಲಿ ಧಾರ್ಮಿಕ ಭಾವನೆಗಳನ್ನು ತಂದು ಕೊಡುವುದು ಈ ಮಾಸವು. ಆದರೆ ಮಹಾತ್ಮರ ಸಂಪೂರ್ಣ ಆಯುಷ್ಯವೇ ಶ್ರಾವಣ(ಶ್ರವಣ) ಮಾಸವು.

ಭಗವಂತನ ಮೇಲೆ ನಿರತಿಶಯವಾದ ಅನುರಾಗವೇ ಭಕ್ತಿ. ಅಂತರಂಗ ಬಹಿರಂಗ ಶುದ್ಧ ಮಾಡಿಕೊಂಡು ಕಾಮಾದಿಗಳನ್ನು ಜಯಿಸಿ ದುರ್ಜನರ ಸಂಗವನು ನೀಗಿ ಧ್ಯಾನ ವೈರಾಗ್ಯಗಳನ್ನು ಹೊಂದಿ ಜೀವಭಾವವಳಿದು ಕರ್ಮೇಂದ್ರಿಯಗಳ ಗುಣಧರ್ಮವನ್ನು ಭಸ್ಮ ಮಾಡಿ ಅಂಗವೆಲ್ಲ ಬೆಳಗುವಂತೆ ಮಾಡುವುದೇ ಭಕ್ತಿ. ಭಕ್ತಿಯಿಲ್ಲದ ಜ್ಞಾನ ಬರಡು ಭಕ್ತ ಬೆರದ ಜ್ಞಾನವೇ ಸುಜ್ಞಾನ. ಭಕ್ತಿಯಿಲ್ಲದ ಆಚಾರ ಶುಷ್ಕಾಚಾರ. ಭಕ್ತಿರಸ ಸಮ್ಮಿಲನವಾದ ಸಮರಸದಿಂದ ಸ್ಫುರಿಸುವ ತೃಪ್ತಿಯೇ ಭಕ್ತಿಯ ಅನುಭವ.

ನವವಿಧ ಭಕ್ತಿಗಳಲ್ಲಿ ಮೊದಲನೆಯದಾದ ಶ್ರವಣ ಭೂತಿಯ ಮಾರ್ಗವನ್ನು ಅನುಸರಿಸುವ ಉದ್ದೇಶದಿಂದ ಮಹಾತ್ಮರ ಪುರಾಣ ಪುಣ್ಯ ಕಥೆಗಳನ್ನು ಕೇಳುವುದು ಹಾಗೂ ಮೋಕ್ಷ ಪ್ರತಿಪಾದಿಕ ಶಾಸ್ತ್ರಗಳನ್ನು ಸ್ವಾಧ್ಯಾಯ ಮಾಡುವುದು ಮೊದಲಾದ ಧಾರ್ಮಿಕ ಕಾರ್ಯಕ್ರಮಗಳನ್ನು ಈ ಮಾಸದಲ್ಲಿ ಹಮ್ಮಿಕ್ಕೊಳ್ಳುವ ರೂಢಿಯಲ್ಲಿದೆ.

ಪ್ರೇಮರೂಪದಲ್ಲಿ ಪರಮಾತ್ಮನನ್ನು ಕಾಣುವ ಮಾರ್ಗವೇ ಭಕ್ತಿಯ ಮಾರ್ಗ. ಪಂಚೇಂದ್ರಿಯಗಳಲ್ಲಿ ಶಿವಭಾವ ವಿಕಾಸವನ್ನು ಪಡೆದು ಜೀವನು ಶಿವನಾಗುವ ರೀತಿಯನ್ನು ಸಾಧಿಸುವುದೇ ಭಕ್ತಿಯ ಸಾಧನೆಯಾಗಿದೆ. ಆತ್ಮನ ಹಾಗೂ ಪರಮಾತ್ಮನ ನೆಲೆ ತಿಳಿಯದವರಿಗೆ ನಿಜ (ದೃಢ) ಭಕ್ತಿ ಉಂಟಾಗಲಾರದು. ಒಳ್ಳೆಯ ನೀತಿ ಸದಾಚಾರ ಸದ್ಗುಣ ಸಂಪನ್ನರಾದವರೇ ಭಕ್ತಾದಿಗಳು. ಮಾನವೀಯ ಮೌಲ್ಯಗಳು ಕುಸಿಯುತ್ತಿರುವ ಇಂದಿನ ಕಾಲದಲ್ಲಿ ಗುಡಿ–ಮಠ–ಮಂದಿರಗಳು ಸಾಕಷ್ಟಾದರೂ ಭಕ್ತರಲ್ಲಿ ಮಾತ್ರ ಸದ್ಭಾವ ಬೆಳೆಯಲಿಲ್ಲ. ನಿಜ ಭಕ್ತಿಗೆ (ನಿಷ್ಕಾಮ ಭಕ್ತಿಗೆ) ದೇವ ಮೆಚ್ಚುವನಲ್ಲದೆ ಡಾಂಭಿಕ ಭಕ್ತಿಗೆ ಮೆಚ್ಚಲಾರನು.

ಅಂತ್ಯಕಾಲಕ್ಕೆ ಶಿವನನ್ನು ನೆನೆಯಬೇಕಾದರೆ ಮೊದಲಿನಿಂದಲೂ ಸತತ ನೆನೆಯಬೇಕಾದ ಅಭ್ಯಾಸ ಅವಶ್ಯ. ಇಲ್ಲದಿದ್ದರೆ ಸಂಸಾರ ಭೋಗವಾಸನೆಯಿಂದ ವಿಪರೀತ ಭಾವನೆಗಳು ಮಾತ್ರ ಬರುವುವು. ಯಾವ ಭಕ್ತರು ಶಿವನ ಚಿಂತನೆಯಲ್ಲಿರುವರೋ ಅಂಥವರನ್ನು ಶಿವನು ಚಿಂತಿಸುವನು. ಶರೀರ ಮನಸ್ಸು ಇಂದ್ರಿಯಗಳ ವ್ಯವಹಾರ ವನ್ನು ಶಿವನಿಗೆ ಒಪ್ಪಿಸಿ ಆ ನಿರ್ಗುಣ ಮೂರ್ತಿಯನ್ನು ಸುಗುಣ ಮೂರ್ತಿಯನ್ನಾಗಿ ಮಾಡಿ ಮನಸ್ಸನ್ನು ಅವನಿಗೆ ಒಪ್ಪಿಸಿ ತಾನು ಬಚ್ಚಬರಿಯ ಬಯಲಿನಲ್ಲಿಯೇ ಭಕ್ತಿಯನ್ನು ಮಾಡುತ್ತಿದ್ದರೆ ಅದು ನಿರ್ಗುಣ ಭಕ್ತಿಯೆನಿಸುವದು. ಹೀಗೆ ನಿರ್ಗುಣ ಭಕ್ತನಾದವನು ಯಾವ ಪದವಿಗಳನ್ನು ಅಪೇಕ್ಷಿಸದೇ ವಾಸನೆಗಳನ್ನು ಬಿಟ್ಟು ನಿಷ್ಕಾಮ ಭಾವನೆಯಿಂದ ಶುದ್ಧ ಬುದ್ಧಿಯಿಂದ ಭಜಿಸಿ ಸರ್ವೋತ್ತಮ ಭಕ್ತನೆನಿಸಿ ಕೊಳ್ಳುವನು. ಇದೇ ನಿಜ ಭಕ್ತಿಯು. ಇಂಥ ನಿಜ ಭಕ್ತಿಯು ಅತ್ಯಂತ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿ ಜೀವನ್ಮುಕ್ತಿಗೆ ಪರಮ ಸಾಧನವಾಗುವುದು.

ನನ್ನಲ್ಲಿಯೇ ಇಟ್ಟಿರುವ ನಿನ್ನ ಭಕ್ತಿಯು ನಿನ್ನ ಸರ್ವ ಪಾಪಗಳನ್ನು ನಿರ್ಮೂಲನ ಮಾಡುತ್ತದೆ ಅಂತಾ ಭಗವಂತನ ವಾಣಿ.

## ಲಿಂಗಃ ನಿರಾಕಾರ–ಸಾಕಾರ

**ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ**
**ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ**
**ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ ಅಗಮ್ಯ,**
**ಅಗೋಚರ, ಅಪ್ರತಿಮ ಲಿಂಗವೇ ಕೂಡಲ ಸಂಗಮ**
**ದೇವಯ್ಯ ನೀವೆನ್ನ ಕಾರಸ್ಥಲಕೆ ಬಂದು**
**ಚುಳುಕಾದಿರಯ್ಯಾ.** – **ವಿಶ್ವಗುರು ಬಸವಣ್ಣನವರು**

ವಿಶ್ವದ ಒಳ–ಹೊರಗೆಲ್ಲ ತುಂಬಿಕೊಂಡಿರುವ ಪರಾತ್ಪರ ಪರವಸ್ತುವು ನಿರಾಕಾರವಾಗಿದೆ. ನಿರಾಕಾರವಾಗಿರುವ ಪರಮಚೇತನವು ಭಕ್ತನ ತನು–ಮನ–ಭಾವಕ್ಕೆ ತೃಪ್ತಿಯನ್ನು ನೀಡದು.

ಆದ್ದರಿಂದಲೇ ವಿಶ್ವಗುರು ಬಸವಣ್ಣನವರು ಜಗದಗಲ ಮುಗಿಲಗಲ, ಮಿಗೆಯಗಲವಾಗಿರುವ, ಪಾತಾಳ ದಿಂದತ್ತಿತ್ತ ವ್ಯಾಪಿಸಿರುವ, ಬ್ರಹ್ಮಾಂಡದಿಂದ ಆಚೆಯೂ ವ್ಯಾಪಿಸಿರುವ, ಅಗಮ್ಯ, ಅಗೋಚರ, ಅಪ್ರತಿಮವಾಗಿರುವ ನಿಷ್ಕಲ, ನಿಶೂನ್ಯ, ನಿರಂಜನ ಸ್ವರೂಪದಲ್ಲಿರುವ ನಿರಾಕಾರ ಲಿಂಗತತ್ವವನ್ನು ಸ್ವಾನುಭಾವ ದಿಂದ ಸಾಕಾರಕ್ಕೆ ತಂದುಕೊಂಡು, ಅದನ್ನು ಚುಳುಕಾಗಿಸಿ ಅಂಗುಷ್ಠ ಗಾತ್ರದಲ್ಲಿ ಇಷ್ಟಲಿಂಗವಾಗಿ ಕರಸ್ಥಲಕ್ಕೆ ತಂದುಕೊಂಡರು. ಇದು 'ನಿರಾಕಾರ–ಸಾಕಾರ ಏಕೋದೇವ' ವಾಗಿದೆ.





# ಎಂಥ ಹಸಿವು ಬೇಕು ?

–ಟಿ.ಆರ್. ಮಹಾದೇವಪ್ಪ, ಗೌರವ ಸಂಪಾದಕರು, ಧರ್ಮಪ್ರಭ ಪತ್ರಿಕೆ,

ಮನುಷ್ಯನಿಗೆ ಹಸಿವು–ನೀರಡಿಕೆಗಳು ಸಹಜವಾದುವು. 'ಹಸಿವೆಂಬ ಹೆಬ್ಬಾವು ಬಸಿರ ಹಿಡಿದರೆ ವಿಷವೇರುವುದು ಆಪಾದ ಮಸ್ತಕಕೆ' ಎಂಬ ಮಾತು ನಿಜ. ಆ ವಿಷವನಿಳುಹಲು ಬೇಕು ಆಹಾರವೆಂಬ ಗಾರುಡಿಗ. ಹೊಟ್ಟೆಯಲಿ ಹುಟ್ಟದೀ ಬೆಂಕಿಯು ಪ್ರಳಯಾಗ್ನಿಗೆ ಸಮ. ತುತ್ತಿನ ಚೀಲವ ತುಂಬು' ಎಂದು ಕವಿ ಅಡಿಗರು ಹೇಳಿದರೆ, 'ಹೊಟ್ಟೆರಾಯನ ನಿತ್ಯದಟ್ಟ ಹಾಸವೋ ಬಾಳು' ಎಂದು ಡಿ.ವಿ.ಜಿ. ಉದ್ದರಿಸಿದ್ದಾರೆ. ಹಸಿವೆನ್ನುವುದು ಇಲ್ಲದಿದ್ದರೆ ಬಹುಶಃ ಜಗತ್ತೆಲ್ಲವೂ ನಿಷ್ಕ್ರಿಯವಾಗುತ್ತಿತ್ತೇನೊ! ದಾಸರೆಂದಂತೆ 'ಎಲ್ಲವೂ ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ, ಹೊಟ್ಟೆಯುನ್ನು ತುಂಬಿಸಿ ಹಸಿವ ಹಿಂಗಿಸುವುದು ಸುಲಭದ ಮಾತಲ್ಲ. ಏಕೆಂದರೆ ಹೊಟ್ಟೆಯನ್ನು ಹೆಚ್ಚು ತುಂಬಿಸಿದರೂ ಕಷ್ಟ, ಖಾಲಿ ಬಿಟ್ಟಿರುವುದೂ ಕಷ್ಟ. 'ಅದು ಮದಿಸುವುದಾದರೆ, ಕುಂದುವುದು ನಿರಾಕರಿಸೆ'. ಆದ್ದರಿಂದ ಆಹಾರವ ಕಿರಿದು ಮಾಡಿ ಬದುಕಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ತಿನ್ನಬೇಕು ಎನ್ನುತಾರೆ ಅನುಭಾವಿಗಳು. ಇದು ದೇಹದ ಹಸಿವಿನ ಮಾತಾಯಿತು.

ಒಲೆಯಲ್ಲಿ ಅಟ್ಟು ಉಣ್ಣುವುದು ಜೀವಿಸಲು ಅಷ್ಟೆ. ಅದೇ ಪರಮ ಗುರಿಯಲ್ಲ. ತಲೆಯಲ್ಲಿ ಅಟ್ಟುಣ್ಣುವುದು, ಹೃದಯದಲ್ಲಿ ಪಾಕ ಮಾಡಿ ಉಣ್ಣುವುದು ಮನುಷ್ಯನಿಗೆ ಇರುವ ಅದ್ಭುತವಾದ ಶಕ್ತಿ. ಇದು ಮಾನಸಿಕ ಹಸಿವೆಯನ್ನು ತಣಿಸುತ್ತದೆ. ಅದೇ ಸಂಸ್ಕೃತಿಯ ಸರಕು. ಇದಕ್ಕೂ ಮಿಗಿಲಾದ ಇನ್ನೊಂದು ಹಸಿವೆಯಿದೆ. ಅದೇ ಆತ್ಮದ ಹಸಿವು. ಆಧ್ಯಾತ್ಮ ಚಿಂತನ, ಧರ್ಮ ಜಿಜ್ಞಾಸೆಗಳು ಆ ಹಸಿವನ್ನು ಹಿಂಗಿಸುತ್ತದೆ. ಅದು ದೊರಕಿಸುವ ತಪ್ತಿ, ನಿತ್ಯ ಅಮೂಲ್ಯ. ಮನುಷ್ಯ ಯಾವ ಬಗೆಯ ಹಸಿವನ್ನು ಹೊಂದಿದ್ದಾನೆ; ಅದನ್ನು ತಣಿಸಲು ಆತ ಹಿಡಿದ ಮಾರ್ಗ ಯಾವುದು ಎಂಬುದರ ಮೇಲೆ ಅವನ ವ್ಯಕ್ತಿತ್ವವನ್ನು ಅಳೆಯಬೇಕಾಗುತ್ತದೆ.

ಲೋಕದಲ್ಲಿ ಮುಕ್ಕಾಲು ಮೂರು ಪಾಲು ಮಂದಿ ಮೊದಲ ಹಂತದಲ್ಲಿ ನಿಲ್ಲುತ್ತಾರೆ. ಅವರ ಎಲ್ಲಾ ವ್ಯವಹಾರಕ್ಕೂ ಹೊಟ್ಟೆಯೇ ಕೇಂದ್ರ, ಅದನ್ನು ತುಂಬಿಸುವುದರಲ್ಲೇ ಅವರ ಎಲ್ಲಾ ಶಕ್ತಿಗಳೂ ವ್ಯಯವಾಗುತ್ತದೆ. ಹಸಿದ ತೋಳ ಹೊಟ್ಟೆ ತುಂಬಿತ್ತಿದ್ದಂತೆ ಸುಮ್ಮನಾಗುವುದು. ಆದರೆ ಮನುಷ್ಯ ತನ್ನ ಹೊಟ್ಟೆ ತುಂಬಿದ ಮೇಲೂ ತನ್ನ ಮಗ, ಮುಂದೆ ಹುಟ್ಟಲಿರುವ ಮೊಮ್ಮಗ, ಅವನ ಮಗ– ಇವರ ಹೊಟ್ಟೆ ತುಂಬಲಿಕ್ಕೆ ಎಂದು ಸಂಪತ್ತನ್ನು ಗಳಿಸುತ್ತಾ ಹೋಗುತ್ತಾನೆ. ಅಡಿಗೆ ಮಾಡಲು ಬೆರಣಿಯಂಥ ಉರುವಲು ಬೇಕು. ಅದನ್ನು ಸಂಗ್ರಹಿಸಿಡುವುದರಲ್ಲೇ ತಮ್ಮ ಜೀವಮಾನ ಕಳೆದುಬಿಟ್ಟರೆ ಅಡಿಗೆ ಮಾಡಿ ಉಣ್ಣುವುದು ಯಾವಾಗ? ಜೀವನ ಹೀಗೆ ವ್ಯರ್ಥವಾಗುವುದರತ್ತ ಜ್ಞಾನಿಗಳು ಗಮನ ಸೆಳೆಯುತ್ತಾರೆ. ಅಲ್ಲದೆ ಸ್ವಾರ್ಥಕೇಂದ್ರಿತನಾದ ಮನುಷ್ಯ ಇವೊತ್ತು ತಾನುಂಡದ್ದೇ ಬಂತು ಎಂದುಕೊಂಡರೆ ಅದಕ್ಕೂ ಸಹ ಹೀಗೆ ಎಚ್ಚರಿಸಿದ್ದಾರೆ. ಉಂಡುದು ಬಂದಿತ್ತೆಂಬ ಸಂದೇಹ ಮಾನವ ನೀ ಕೇಳಾ ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ ಉಂಡುದು ಆಗಳೇ ಅಪೇಯವಾಯಿತ್ತು.

ನಿಜ, ನುಂಗಿದ ಅಪೇಯ ತಾನೆ! ದೇಹ ಬದುಕಿರಲು ಆಹಾರ ಬೇಕು, ಆದರೆ ಆದಷ್ಟಾದರೆ ಸಾಲದು. ಅದರ ಜೊತೆಗೆ ಮನಸ್ಸಿಗೂ, ಹೃದಯಕ್ಕೂ ಆಹಾರ ಬೇಡವೇ? ಆ ಹಸಿವ ತಣಿಸಲು ಪ್ರೀತಿ, ವಿಶ್ವಾಸ ಬೇಕು; ಮಾನ ಮರ್ಯಾದೆ ಬೇಕು. ಇವೇ ಜೀವದ್ರವ್ಯ.

ಇವು ಬೇಕೆಂಬ ಹಸಿವುಳ್ಳವರೇ ಎರಡನೇ ಗುಂಪಿನ ಜನ. ಮಾನಸಿಕ ನೆಮ್ಮದಿಗಾಗಿ ಕಾತರಿಸುವವರು; ಚಿತ್ತಶಾಂತಿಗಾಗಿ ಹಪಹಪಿಸುವವರು. ಇದಕ್ಕಾಗಿ ಅವರು ಗ್ರಂಥಾಧ್ಯಯನ ಮಾಡಬಹುದು. ಜ್ಞಾನಿಗಳ, ಅನುಭಾವಿಗಳ ಸಂಪರ್ಕ ಬೆಳೆಸಬಹುದು; ತೀರ್ಥಯಾತ್ರೆ ಮಾಡಬಹುದು. ಮಾನಸಿಕ ಹಸಿವು ಹಿಂಗುವ ತನಕ ಇಂಥ ಸತ್ಕಾರ್ಯವನ್ನು ಮಾಡುತ್ತಾ ಸಾಗುತ್ತಾರೆ. ಸಮಾಜದಲ್ಲಿ ಇಂಥ ಹಸಿವಿರುವವರು ಹೆಚ್ಚಿದರೆ ಸಂಸ್ಕೃತಿ ಸಂಪತ್ತು ಹೆಚ್ಚುತ್ತದೆ; ಸಾಮಾಜಿಕ ಸ್ವಾಸ್ಥ್ಯ ನೆಲೆಗೊಳ್ಳುತ್ತದೆ.

ಇನ್ನು ಮೂರನೆಯ ಗುಂಪು ಆತ್ಮದ ಹಸಿವಿರುವವರು. ಇಂಥವರು ತೀರಾ ಅಪರೂಪದವರು. ಇಂಥವರು ಮಾನಸಿಕವಾಗಿ ಪ್ರಬುದ್ಧರು, ಸಾಧನೆಯ ಹಾದಿಗರು. ಅವರಿಗೆ ಹೊಟ್ಟೆ ಹಸಿವಿಗಿಂತ ಇವರ ಹಸಿವು ತೀವ್ರ. ಅಂತೆಯೇ ಅವರು ಆತ್ಮಶೋಧನೆ ಹಾಗೂ ಆತ್ಮ ಚಿಂತನೆಗಳನ್ನು ತೊಡಗಿಸುತ್ತಾರೆ. ಅಂದಮಾತ್ರಕ್ಕೆ ಲೌಕಿಕವನ್ನು ಬಿಟ್ಟು, ಸದಾ ಪಾರಮಾರ್ಥಿಕವನ್ನು ಚಿಂತಿಸುವ ವಿರಾಗಿಗಳು ಎಂದಲ್ಲ. ಲೋಕ ಜೀವನದಲ್ಲಿದ್ದುಕೊಂಡೇ ಇದನ್ನು ಸಾಧಿಸುತ್ತಾರೆ.

ಉದಾಹರಣೆಗೆ ಶರಣರು, ಲೌಕಿಕ ಜೀವನವನ್ನು ಉದಾತ್ತಗೊಳಿಸಿ ಇಹದಲ್ಲೇ ಪರವನ್ನು ಸಾಧಿಸಿದ ಅಪರೂಪದವರು. ನಡೆ–ನುಡಿಗಳೊಂದಾದ ಅವರ ಬದುಕು

ಅನುಸರಣ ಸಾಧ್ಯವೆನಿಸಿದೆ. ಮಾಡುವ ವೃತ್ತಿಯನ್ನೇ ಸತ್ಯಶುದ್ಧ ಕಾಯಕವಾಗಿಸಿ, ಅದರ ಫಲವನ್ನು ಹಂಚಿ ಉಣ್ಣುವ ಮೂಲಕ ಬದುಕನ್ನೇ ಯೋಗವಾಗಿಸಿಕೊಂಡ ಧನ್ಯಾತ್ಮರು ಅವರು.

ಮತ್ತೆ ಕೆಲವರಿಗೆ ಲೋಕದ ಬದುಕು ನಿಸ್ಸಾರವೆನಿಸಿ, ಭೋಗಜೀವನ ತ್ಯಾಜ್ಯವೆನಿಸಿ ಅದಕ್ಕೆ ವಿಮುಖರಾಗಿ ಯೋಗ ಮಾರ್ಗ ಹಿಡಿದು ಆತ್ಮದ ಹಸಿವ ನೀಗಿಕೊಳ್ಳಲು ತಪಸ್ಸಿನ ಕಠಿಣಮಾರ್ಗವನ್ನು ಅನುಸರಿಸಿದ್ದಾರೆ. ಸಿದ್ಧಾರ್ಥನಿಗೆ ಉಂಟಾ ಯಿತು ಅಂಥ ಹಸಿವು-ಆತನಿಗೆ ಏನೂ ಕೊರತೆಯಿರಲಿಲ್ಲ. ಸಾಮ್ರಾಜ್ಯದ ಅಧಿಪತ್ಯ, ಮೋಹದ ಮಡದಿ, ಮುದ್ದಿನ ಮಗು, ಸವೆಯದ ಭೋಗಭಾಗ್ಯ, ಕೇಳಿದ್ದೆಲ್ಲಾ ಕೈ ನೀಡಿದಲ್ಲಿ ! ಇವಾವುದೂ ಅವನಿಗುಂಟಾದ ಹಸಿವನ್ನು ತಣಿಸಲಿಲ್ಲ. 'ಜಗವೆಲ್ಲಾ ಮಲಗಿರಲು ಅವನೊಬ್ಬನೆದ್ದ!' ಬೇರೆ ದಾರಿಯನ್ನೇ ತುಳಿದ! ನಿರಂತರ ಸಾಧನೆ ಮಾಡಿ ಆತ್ಮದ ಹಸಿವ ತಣಿಸುವ ಸುಜ್ಞಾನವನ್ನು ಪಡೆದ, ಬುದ್ಧನಾದ.

ಆದ್ದರಿಂದ ನಮಗೆ ಹೊಟ್ಟೆ ಹಸಿವಿನ ಜೊತೆಗೆ ಜೀವನ ವನ್ನು ಉದಾತ್ತಗೊಳಿಸುವ, ಆ ಮೂಲಕ ಸಾರ್ಥಕಗೊಳಿಸುವ ಉಳಿದ ಹಸಿವುಗಳು ಬಾಯ್ತೆರೆಯಬೇಕು. ನಾವು ಅದನ್ನು ತಣಿಸುವುದನ್ನು ಕಲಿಯಬೇಕು. ಆಗಲೇ ಬದುಕು ಸಾರ್ಥಕ. ⌘

## ಸೋಮೇಶ್ವರ ಶತಕ

*ಕೆಲವಂ ಬಲ್ಲವರಿಂದ ಕಲ್ತು ಕೆಲವಂ*
*ಶಾಸ್ತ್ರಂಗಳಂ ಕೇಳುತಂ ।*
*ಕೆಲವಂ ಮಾಳ್ಪವರಿಂದ ಕಂಡು ಕೆಲವಂ*
*ಸುಜ್ಞಾನದಿಂ ನೋಡುತಂ ॥*
*ಕೆಲವಂ ಸಜ್ಜನಸಂಗದಿಂದಲರಿಯಲ್ ಸರ್ವಜ್ಞಪ್ಪಂ*
*ನರಂ ।*
*ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀ*
*ಚೆನ್ನಸೋಮೇಶ್ವರಾ ॥*

ಅನೇಕ ತೊರೆಗಳು ಸೇರಿ ಒಂದು ದೊಡ್ಡ ಸಮುದ್ರ ವಾಗುವಂತೆ ಮನುಷ್ಯನು ಕೆಲವು ವಿಷಯಗಳನ್ನು ಪಂಡಿತರಿಂದಲೂ, ಕೆಲವನ್ನು ಶಾಸ್ತ್ರಗಳಿಂದಲೂ ಕೆಲ ವನ್ನು ಇತರರ ಆಚರಣೆಯಿಂದಲೂ, ಕೆಲವನ್ನು ಸ್ವಬುದ್ಧಿಯಿಂದಲೂ, ಕೆಲವನ್ನು ಸುಜನರ ಸಹವಾಸ ದಿಂದಲೂ ತಿಳಿದುಕೊಳ್ಳುವುದರಿಂದ ಸರ್ವಜ್ಞನಾಗುವನು.

## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿಯಾಗಿ 'ಸಿದ್ಧಗಂಗಾ' ಮಾಸಪತ್ರಿಕೆ 42ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಾಂತ ಪ್ರಸಾರ ಹೊಂದಿದೆ. ದೀರ್ಘಕಾಲದ ಮುನ್ನಡೆಗೆ ಪೂಜ್ಯ ಶ್ರೀ ಶ್ರೀಗಳವರ ಸೇವೆ ತ್ಯಾಗ ಮತ್ತು ಉದಾರತೆಯಿಂದ ನೀವು ಆಜೀವ ಸದಸ್ಯತ್ವ ಪಡೆದಿರುವುದು ಆಧಾರ ಎಂದು ಭಾವಿಸಿದೆ.

'ಸಿದ್ಧಗಂಗಾ' ಮುನ್ನಡೆಗೆ ಆರ್ಥಿಕ ಪರಿಸ್ಥಿತಿ (ಹಣಕಾಸು) ಕುಂಠಿತವಾಗಿದೆ. ಇದಕ್ಕೆ ಕಾರಣ ಆಜೀವ ಮೊತ್ತದ ನಿಶ್ಚಿತ ಠೇವಣಿಯಲ್ಲಿ ಬ್ಯಾಂಕ್ ಬಡ್ಡಿದರ ಇಳಿತ, ಮತ್ತು ಪೇಪರ್ ಮುದ್ರಣ, ಅಂಚೆವೆಚ್ಚ ದುಬಾರಿಯಾಗಿರುವುದು. ಈ ಸಮಸ್ಯೆ ನಿಮ್ಮ ಗಮನಕ್ಕೆ ತರಲಾಗುತ್ತಿದೆ.

ಈ ಪರಿಣಾಮ ಆಜೀವ ಚಂದಾವನ್ನು 2004ನೇ ವರ್ಷದಲ್ಲಿ ಶ್ರೀಶ್ರೀಗಳವರ ಅನುಮತಿ ಮೇರೆಗೆ ಸಂಘ 1000/- ರೂ. ಗೆ ನಿರ್ಧರಿಸಿತು. ಈ ತೀರ್ಮಾನದಂತೆ 1000/- ರೂ.ಗೆ ಸರಿ ದೂಗಿಸುವಂತೆ ಹಿಂದೆ 500/-ರೂ., 600/-ರೂ ನೀಡಿ ಆಜೀವ ಸದಸ್ಯರಾಗಿದ್ದವರು ಬಾಕಿ 500/- ರೂ., 400/-ರೂ. ಸಂದಾಯ ಮಾಡುತ್ತಿದ್ದಾರೆ.

ಈ ಉಳಿಕೆ ಹಣ 500/-ರೂ., 400/ ರೂ ಸಂದಾಯ ಮಾಡದೇ ಇರುವ ಆಜೀವ ಸದಸ್ಯರುಗಳು ಈ ಬಗ್ಗೆ ದಯಮಾಡಿ ತೀವ್ರ ಗಮನ ಹರಿಸಬೇಕಾಗಿ ಕೋರುತ್ತೇವೆ. ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ ನಗದಾಗಿ / ಎಂ.ಒ. / ಚೆಕ್/ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಪತ್ರಿಕೆ ಚಿರಂಜೀವಿಯಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ನಮ್ರ ವಿನಂತಿ.

ಪ್ರಕಾಶಕರು
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.





# ದೇವರ ಒಲುಮೆಯ ಸಂಪಾದನೆ

– **ಯು.ಎನ್. ಸಂಗನಾಳಮಠ,** ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಹೊನ್ನಾಳಿ, ದಾವಣಗೆರೆ

ಒಬ್ಬ ಶಿಷ್ಯ ಗುರುವಿನ ಬಳಿ ಬಂದು ಗುರುಗಳೇ ದೇವರನ್ನು ಹೇಗೆ ಪಡೆಯಬಹುದು? ಎಂದು ಕೇಳಿದನು. ಗುರುವು ಅವನನ್ನು ಸ್ವಲ್ಪದಿನ ತನ್ನ ಜೊತೆ ಇರಲು ಹೇಳಿದನು. ಒಂದು ದಿನ ಶಿಷ್ಯನನ್ನು ಸ್ನಾನ ಮಾಡಲು ನದಿಗೆ ಜೊತೆಯಲ್ಲಿ ಕರೆದುಕೊಂಡು ಹೋದನು. ಸ್ನಾನ ಮಾಡುತ್ತಿರುವಾಗ ಗುರು ಅವನ ತಲೆಯನ್ನು ನೀರಿನಲ್ಲಿ ಅದುಮಿ ಹಿಡಿದುಕೊಂಡನು. ಶಿಷ್ಯ ಒದ್ದಾಡಲಾರಂಭಿಸಿದ. ನಂತರ ಶಿಷ್ಯನ ತಲೆಯನ್ನು ಮೇಲೆತ್ತಿದನು. ಶಿಷ್ಯ ಸುಸ್ತಾಗಿದ್ದ. ಗುರು ಕೇಳಿದ ನೀರಿನೊಳಗೆ ಇದ್ದಾಗ ಹೇಗಿತ್ತು? ಅದಕ್ಕೆ ಸ್ವಲ್ಪ ಉಸಿರಾಡಿದರೆ ಸಾಕು ಎನಿಸಿತ್ತು ಎಂದ ಶಿಷ್ಯ. ಅದಕ್ಕೆ ಗುರು 'ನೀನು ಕ್ಷಣಕಾಲ ಉಸಿರಾಡುವುದಕ್ಕೆ ಹೇಗೆ ಅಂಬಲಿಸಿದೆಯೋ ಹಾಗೆ ದೇವರಿ ಗಾಗಿ ಹಂಬಲಿಸಿದರೆ ದೇವರನ್ನು ಕಾಣುವೆ' ಎಂದರು.

ಹಾಗಾದರೆ ದೇವರು ಇರುವನೇ ಎಂಬ ಪ್ರಶ್ನೆ ಉದ್ಭವಿ ಸುತ್ತದೆ. ಕೆಲವು ಜ್ಞಾನಿಗಳು, ಅನುಭಾವಿಗಳ ಪ್ರಕಾರ- ದೇವರು ಹಾಲಿನಲ್ಲಿರುವ ತುಪ್ಪದಂತೆ ಇರುವನು. ಚಿತ್ರವನ್ನು ಕಲ್ಪಿಸಿ ಕೊಂಡ ಚಿತ್ರಕಾರನ ಮನಸ್ಥಿತಿಯಂತೆ ಇರುವನು. ಮರುಳು ಗಾಡಿನಲ್ಲಿ ಮರೀಚಿಕೆ ಕಂಡು ಮರೆಯಾಗಲು ಕಾರಣವಾಗುವ ಬಿಸಿಲಿನಂತೆ ಇದ್ದಾನೆ. ಕಣ್ಣಿನಲ್ಲಿರುವ ಜ್ಯೋತಿಯಂತೆ ಇದ್ದಾನೆ. ಮಾತನಾಡುವ ಶಬ್ದದಲ್ಲಿ ಅರ್ಥ ಇರುವಂತೆ ಇದ್ದಾನೆ ಎನ್ನುತ್ತಾರೆ. ಅಂದರೆ ದೇವರು ಕಂಡೂ ಕಾಣದ ಹಾಗೆ ಅವ್ಯಕ್ತನಾಗಿದ್ದಾನೆ. ಹಾಲಿನಲ್ಲಿ ತುಪ್ಪ ಇರುವುದನ್ನು ಯಾವ ಸೂಕ್ಷ್ಮದರ್ಶಕದಿಂದ ನೋಡಲು ಸಾಧ್ಯವಿಲ್ಲ. ಆದರೆ ತುಪ್ಪ ಇರುವುದನ್ನು ನಿರಾಕರಿಸುವಂತಿಲ್ಲ. ಚಿತ್ರ, ಇನ್ನೂ ಮೂಡದ ಚಿತ್ರಕಾರನ ಕಲ್ಪನೆಯೊಳಗಿನಂತೆ ದೇವರು ಇದ್ದಾನೆ. ಕಣ್ಣಿನಲ್ಲಿ ಎಲ್ಲವನ್ನೂ ಕಾಣುವ ಜ್ಯೋತಿ ಇದೆ. ಆದರೆ ಯಾವುದೇ ದೀಪವಾಗಿ ಕಾಣಿಸುವುದಿಲ್ಲ. ಹಾಗೆ ಪರಮಾತ್ಮ ಇರುವನು. ನಾವು ನುಡಿಯುವ ಶಬ್ದ ನುಡಿಯ ಅರ್ಥವನ್ನು ಗ್ರಹಿಸಿ ವ್ಯವಹಾರ ಮಾಡುತ್ತೇವೆ ಹಾಗೆ ನುಡಿಯೊಳಗಿನ ಅರ್ಥದಂತೆ ದೇವರಿದ್ದಾನೆ ಎಂದು ಈ ರೀತಿ ಚನ್ನಬಸವಣ್ಣನವರು ಹೇಳಿದ್ದಾರೆ.

ಗುರುವೊಬ್ಬ ದೀಪದ ಬೆಳಕಿನಲ್ಲಿ ಶಿಷ್ಯನಿಗೆ ಪಾಠ ಹೇಳುತ್ತಿದ್ದರು. ಜೋರಾಗಿ ಗಾಳಿ ಬೀಸಿದಾಗ ಆ ದೀಪ ಆರಿತು. ಆಗ ಶಿಷ್ಯನು ಕೇಳಿದ- ಗುರುಗಳೇ ದೀಪದ ಉರಿ ಎಲ್ಲಿ ಹೋಯಿತು? ಆಗ ಗುರುಗಳು- ಅದು ಎಲ್ಲಿಂದ ಬಂದಿತೋ ಅಲ್ಲಿಗೇ ಹೊರಟುಹೋಯಿತು ಎಂದರು. ಆದ್ದರಿಂದ ದೇವರೆಲ್ಲಿದ್ದಾನೆ ಎನ್ನುವ ಕೊನೆಕಾಣುವ ವಾದ-ವಿವಾದಗಳಲ್ಲಿ ತೊಡಗದೆ ಆ ದೈವಿಕಶಕ್ತಿ ನಮ್ಮೊಳಗೆ ಇದೆ ಎನ್ನುವುದನ್ನು ನಾವು ಮನಗಾಣಬೇಕು, ಆ ಶಕ್ತಿಯನ್ನು ಬಲಗೊಳಿಸುವುದರಲ್ಲಿ ನಾವು ಮನಸ್ಸನ್ನು ನೆಲೆಗೊಳಿಸಬೇಕು. ದೇವರ ಒಲುಮೆ ಸಂಪಾದಿಸಬೇಕು.

ದೇವರ ಒಲುಮೆಗಾಗಿ ಬಸವಣ್ಣನವರು ಏಳು ತತ್ವಗಳನ್ನು ಹೇಳಿದ್ದಾರೆ- ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇವುಗಳನ್ನು ಆಚರಣೆಯಲ್ಲಿ ತಂದರೆ ಅಂತರಂಗ, ಬಹಿರಂಗ ಶುದ್ಧಿಯಾಗುತ್ತದೆ, ಕಳ್ಳತನ ಮಾಡದಿರುವಾಗ ಕಾಯಕವೇ ಕೈಲಾಸ, ಹಿಂಸೆ ಮಾಡದಿರುವಾಗ ಕಾಯಕವೇ ಕೈಲಾಸ, ಹಿಂಸೆ ಮಾಡದಿರುವಾಗ ದಯವೇ ಬೇಕು ಸಕಲ ಪ್ರಾಣಿಗಳಲ್ಲಿ, ಸುಳ್ಳು ಹೇಳದಿರುವಾಗ ಸತ್ಯವೇ ನುಡಿಯುವುದೇ ದೇವಲೋಕ, ಸಿಟ್ಟಾಗದಿರುವಾಗ ಮನೆಂಯೊಳಗಣ ಬೆಂಕಿ ಮನೆ ಸುಡುವುದಲ್ಲದೆ ನೆರೆಮನೆ ಸುಡುವುದೇ, ಅನ್ಯರಿಗೆ ಅಸಹ್ಯ ಪಡುವಾಗ- ಸಕಲ ಜೀವಾತ್ಮರಿಗೆ ಲೇಸ ಬಯಸುವುದು, ತನ್ನನ್ನು ಪ್ರಶಂಸಿಸುವಾಗ- ಎನಗಿಂತ ಕಿರಿಯರಿಲ್ಲ ಶಿವಭಕ್ತ ರಿಗಿಂತ ಹಿರಿಯರಿಲ್ಲ ಎನ್ನುವ ಬಸವಣ್ಣನವರ ಮಾತುಗಳು ಸಹಾಯಕವಾಗುತ್ತವೆ.

ಆದ್ದರಿಂದ ಈ ವಚನದ ಪ್ರಕಾರ ಮಾನವ ನಡೆದು ಕೊಂಡರೆ ಯಾವುದೇ ಧಾರ್ಮಿಕ ಆಚರಣೆಗಳಿಲ್ಲದೇ ದೇವರ ಒಲುಮೇ ಹೊಂದಬಹುದು. ಆದರೆ ಮಾನವನ ಮನಸ್ಸು ಕೆಲವೊಮ್ಮೆ ಕೆಲವೊಂದು ತಪ್ಪುಗಳನ್ನು ಮಾಡುತ್ತಿರುತ್ತದೆ. ಆ ಮನಸ್ಸನ್ನು ನಿಯಂತ್ರಿಸಲು ಸಹ ಈ ವಚನ ಹೇಳುತ್ತದೆ. ಮನದ ನಿಯಂತ್ರಣವೇ ಪೂಜೆ, ದುಷ್ಟ ಕೃತ್ಯಗಳ ಬಗ್ಗೆ ಮಾನವ ನಿಷ್ಕ್ರಿಯನಾಗಿದ್ದರೆ, ಸಕಲ ರೀತಿಯ ಶುದ್ಧತೆಯನ್ನು ಹೊಂದುತ್ತಾನೆ. ಇದೇ ನಿಜವಾದ ದೇವರ ಒಲುಮೆಯ ಮಾರ್ಗ.

ಮಾನವ ಇಂಥ ಸ್ಥಿತಿಯನ್ನು ತಲುಪಿದಾಗ ಸಹಜ ವಾಗಿ ಸಕಲಜೀವಾತ್ಮರಿಗೆ ಲೇಸನ್ನು ಬಯಸುತ್ತಾನೆ. ಸಹಜವಾಗಿ ವಿಶ್ವಮಾನವನಾಗುತ್ತಾನೆ. ಆದ್ದರಿಂದ ಎಲ್ಲ ಜಾತಿ, ಧರ್ಮಗಳನ್ನು ಮೀರಿನಿಂತ ವಚನವಿದು. ಎಲ್ಲ ಧರ್ಮಗಳ ಸಾರವನ್ನು ಹೇಳುವ ವಚನವಿದು. ಸಕಲ ಮಾನವರಿಗೂ ಪ್ರಿಯವಾದ ವಚನವಿದು. ಸನ್ಮಾರ್ಗದ ಬದುಕಿನ ದಾರಿದೀಪವಾಗಿರುವ ಸಾಮರ್ಥ್ಯ ಹೊಂದಿರುತ್ತದೆ. ⌘

# ಇದು ಕಲಿತವರ ಕಾಲವೇ?

- ಗೊ.ರು. ಚನ್ನಬಸಪ್ಪ, ೪೦೬, ಪ್ರಣಾಮ, ಎಫ್ ರಸ್ತೆ, ರಾಜರಾಜೇಶ್ವರಿನಗರ, ಬೆಂಗಳೂರು-೫೬೦ ೦೯೮.

*'ದೇವರು ಸ್ತ್ರೀಯರನ್ನು ತನ್ನ ತಲೆಯಿಂದಾಗಲೀ, ಪಾದದಿಂದಾಗಲಿ ಸೃಷ್ಟಿಸಲಿಲ್ಲ, ಆದರೆ ತನ್ನ ಪಕ್ಕದಲ್ಲಿ ಸೃಷ್ಟಿಸಿದ'*

-ಯಹೂದೆ ಗಾದೆ

ನಾವು ಮುಂದುವರೆದವರು, ನವನಾಗರೀಕರು, ವಿಚಾರವಾದಿಗಳು, ವೈಜ್ಞಾನಿಕ ಪ್ರಜ್ಞಾವಂತರು, ಲೋಕಜ್ಞಾನ ಬಲ್ಲವರು, ವಿಶ್ವದ ನಾನಾ ಕಡೆ ಹೋಗಿ ಬಂದವರು, ಆಹಾರ-ವಿಹಾರ ಪರಿಣಿತರು, ಗಣಕಯಂತ್ರದ ಗಣ್ಯರು, ನಮಗೆ ಎಲ್ಲ ತಿಳಿದಿದೆ. ಅಕ್ಷರ ಸಂಪತ್ತಿನ ಒಡೆಯರೇ ನಾವು, ಗಳಿಕೆಯ ಗುಟ್ಟು ಗೊತ್ತಿದೆ, ವೆಚ್ಚದ ಹೆಚ್ಚುಗಾರಿಕೆ ನಮ್ಮದು, ಮೂಢ ನಂಬಿಕೆಗಳನ್ನೆಲ್ಲ ಓಡಿಸಿ ಬಿಟ್ಟಿದ್ದೇವೆ, ನಾವು ಜಾತಿಭೇದ-ಲಿಂಗಭೇದ ನೋಡದ ವಿಶ್ವಮಾನವರು, ಲೌಕಿಕ-ಪಾರಮಾರ್ಥಗಳೆರಡೂ ನಮಗೆ ಕರಗತ, ನಾವು ಸರ್ವತಂತ್ರ ಸ್ವತಂತ್ರರು-ಇನ್ನೂ ಮುಂತಾಗಿ ಹೇಳಿಕೊಳ್ಳುವ ಆಧುನಿಕ ಭಾರತದ ಜನ ವಾಸ್ತವವಾಗಿ ಹೀಗಿದ್ದಾರೆಯೇ ಎಂದು ಕೇಳಬೇಕಾದ ಸಂದರ್ಭಗಳಲ್ಲಿ ಪ್ರಚಲಿತವಿರುವ, ಈಗ ನಿತ್ಯ ಮಾಧ್ಯಮದಲ್ಲಿ ಚರ್ಚೆಗೊಳಗಾಗಿರುವ 'ಶಬರಿ ಮಲೈ ಶುದ್ಧೀಕರಣ' ದ ಪ್ರಕರಣದ ಸಂದರ್ಭವೂ ಒಂದು.

ಕೇರಳದಲ್ಲಿರುವ ಶಬರಿಮಲೈ ನಮ್ಮ ದೇಶದಲ್ಲೇ ಪ್ರಸಿದ್ಧವಾಗಿರುವ ಒಂದು ಯಾತ್ರಾಸ್ಥಳ. ಆ ಕ್ಷೇತ್ರದ ಅಧಿದೈವ ಅಯ್ಯಪ್ಪಸ್ವಾಮಿ; ಭಕ್ತ ಬಳಕೆಯಲ್ಲಿ 'ಸ್ವಾಮಿ ಅಯ್ಯಪ್ಪ'. ಈ ಅಯ್ಯಪ್ಪನ ದರ್ಶನಕ್ಕೆ ಪ್ರತಿ ಮಕರ ಸಂಕ್ರಾಂತಿಯ ಸಂದರ್ಭದಲ್ಲಿ ಭಕ್ತರ ನೂಕು ನುಗ್ಗಲು. ಅಯ್ಯಪ್ಪಸ್ವಾಮಿಯ ದೇವಾಲಯಕ್ಕೆ ಒಂದು ಪ್ರವೇಶ ಸಂಹಿತೆಯಿದೆ. ಅದೆಂದರೆ, ಅಲ್ಲಿ ಪುರುಷರಿಗೆ ಮಾತ್ರ ಪ್ರವೇಶ. ಹೆಣ್ಣಾಗಿದ್ದರೆ ೧೦ ವರ್ಷ ವಯಸ್ಸಿನೊಳಗಿರಬೇಕು; ಇಲ್ಲವೆ, ೫೦ ದಾಟಿರಬೇಕು. ದರ್ಶನಕ್ಕಾಗಿ ಹರಕೆ ಹೊತ್ತವರಿಗೆ ೪೧ ದಿನಗಳ ಕಾಲ ಕಟ್ಟುಗ್ರ ದೇಹ ದಂಡನೆಯ ನಿಯಮವಿದೆ. ಈ ಸಂದರ್ಭದಲ್ಲಿ ಗಂಡಸರು ಕ್ಷೌರ ಮಾಡಿಸಿಕೊಳ್ಳುವಂತಿಲ್ಲ; ಮಾಂಸಾಹಾರ, ಧೂಮಪಾನ, ಮದ್ಯಪಾನ, ಅಶ್ಲೀಲತೆ, ಲೈಂಗಿಕ ಸಂಬಂಧಗಳಿಂದ ದೂರ ವಾಗಿರಬೇಕು. ಅಂತಹ ಭಕ್ತರಿಗೆ ಮಾತ್ರ ಪ್ರವೇಶಾವಕಾಶ. ಇದು ಅಲ್ಲಿನ ಕಟ್ಟುಪಾಡು.

ಈ ಕಟ್ಟುಪಾಡುಗಳನ್ನು ಯಾವಾಗ, ಯಾರು, ಹೇಗೆ ಎಲ್ಲಿ ಮಾಡಿದರೋ, ಎಲ್ಲಿ ಮಾಡಿದರೋ ಯಾರಿಗೂ ತಿಳಿಯದು. ಆದರೆ ಸಂಪ್ರದಾಯವಾಗಿ ಪಾಲಿಸಿಕೊಂಡು ಬರಲಾಗುತ್ತಿರುವುದಂತೂ ನಿಜ. ನಮ್ಮ ದೇಶದಲ್ಲಂತೂ ಲೆಕ್ಕವಿಲ್ಲದಷ್ಟು ದೇವಾಲಯಗಳಿವೆ. ಅವುಗಳಲ್ಲಿ ಕೆಲವು ಶ್ರೀಮಂತ; ಕೆಲವು ಬಡ ದೇವಾಲಯಗಳು. ಬಹುಮಟ್ಟಿಗೆ, ಪೂಜೆ-ಪ್ರವೇಶಾದಿಗಳ ಕಟ್ಟುಪಾಡುಗಳಿರುವುದೆಲ್ಲ ಈ ಶ್ರೀಮಂತ ದೇವಾಲಯಗಳಲ್ಲೇ. ಬಡ ದೇವಾಲಯಗಳಲ್ಲಿ ಪೂಜಾರಿಗಳೂ ಇರುವುದಿಲ್ಲ. ಕೆಲವಕ್ಕೆ ಬಾಗಿಲೇ ಇಲ್ಲವೆಂದ ಮೇಲೆ ಅಲ್ಲಿ ಪ್ರವೇಶಕ್ಕೆ ನಿರ್ಬಂಧದ ಮಾತೆಲ್ಲಿ!

ನಾವೀಗ ವಿಚಾರ ಮಾಡುತ್ತಿರುವ ಶಬರಿಮಲೈ ಅಯ್ಯಪ್ಪನ ದೇವಾಲಯ ನಮ್ಮ ದೇಶದ ಶ್ರೀಮಂತ ದೇವಾಲಯಗಳಲ್ಲಿ ಒಂದು. ಸಾಮಾನ್ಯವಾಗಿ ಶ್ರೀಮಂತ ದೇವಾಲಯಗಳಲ್ಲೆಲ್ಲ ಅಲ್ಲಿರುವ ಪೂಜಾರಿ-ಪುರೋಹಿತರೇ ಪ್ರಭುಗಳು. ಅವರು ದೇವರ ಪ್ರತಿನಿಧಿಗಳೇಂದೇ ಭಕ್ತರಲ್ಲಿ ನಂಬುಗೆ ಹುಟ್ಟಿಸಲಾಗಿದೆ. ಹಾಗಾಗಿ, ಅವರು ಹೇಳಿದ್ದೇ 'ವೇದ'; ಮಾಡಿದ್ದೇ 'ಯೋಗ'! ಅವರು ಒಂದು ರಿತಿಯಲ್ಲಿ ಧರ್ಮ ಸಾಮ್ರಾಜ್ಯದ ಅಧಿಕೃತ ವಕ್ತಾರರು.

ಶಬರಿಮಲೈ ಅಯ್ಯಪ್ಪಸ್ವಾಮಿ ದೇವಾಲಯಕ್ಕೆ ಸಂಬಂಧಿಸಿದಂತೆ ಈಗ ವಿಚಿತ್ರ ವಿವಾದವೊಂದು ಎದ್ದಿದೆ. ಅದು ಹತ್ತೊಂಬತ್ತು ವರ್ಷಗಳ ಹಿಂದೆ ಕನ್ನಡದ ಕಲಾವಿದೆ ಜಯಮಾಲಾ ಅವರು ಅಯ್ಯಪ್ಪಸ್ವಾಮಿಯ ಗರ್ಭಾಂಕಣಕ್ಕೆ ಪ್ರವೇಶಿಸಿ, ವಿಗ್ರಹದ ಪಾದಸ್ಪರ್ಶ ಮಾಡಿದ ಸಂಗತಿ. "ಪ್ರವೇಶಾರ್ಹತೆ ಇಲ್ಲದ ಅವರು ದೇವಾಲಯ ಪ್ರವೇಶಿಸಿದುದರಿಂದಾಗಿ ದೇವಾಲಯಕ್ಕೆ ಮತ್ತು ಅಲ್ಲಿನ ದೇವರಿಗೆ ಅಪಚಾರವಾಗಿದೆ. ಅವೆರಡೂ ಅಪವಿತ್ರಗೊಂಡಿವೆ. ಆದ್ದರಿಂದ 'ಅಪರಾಧಿ'ಗೆ ಶಿಕ್ಷೆಯಾಗಬೇಕು" - ಇದು ಅಲ್ಲಿನ ತಂತ್ರಿಗಳ(ಪೂಜಾರಿಗಳು) ವಾದ. ಅವರ ವಾದಕ್ಕೆ ದನಿಗೂಡಿಸುವವರ ಸಂಖ್ಯೆಯೂ ಸಾಕಷ್ಟಿರಬಹುದು. ಈ ಸಂಬಂಧ ನಮ್ಮ ದೇಶದ ಹಿರಿಯ ಪತ್ರಿಕೆಗಳಲ್ಲಿ ಒಂದಾದ 'ದಿ ಟೈಮ್ಸ್ ಆಫ್ ಇಂಡಿಯಾ' ದ ಇದೇ ಜುಲೈ ೧೮ರ ಸಂಚಿಕೆಯಲ್ಲಿ ಪ್ರಕಟವಾಗಿರುವ ಒಂದು ವಿಶೇಷ ವರದಿಯ ಸಾರ ಹೀಗಿದೆ :

"ದುರ್ಗಾ ಮತ್ತು ಕಾಳಿಯರ ನೆಲದಲ್ಲಿ ಮಹಿಳೆಯರಿನ್ನೂ ಅಸ್ಪೃಶ್ಯರು ; ಎರಡನೆಯ ದರ್ಜೆಯ ನಾಗರಿಕರು. ಅವರು ದೇವಾಲಯ ಪ್ರವೇಶಿಸುವುದು ಒಂದು ವಿಗ್ರಹವನ್ನು ಅಪವಿತ್ರಗೊಳಿಸಲು ಮತ್ತು ಸ್ಥಾನಿಕ ಪೂಜಾರಿಗಳನ್ನು ದೇವಾಲಯದ ಶುದ್ಧೀಕರಣದ ಮತಿಭ್ರಮಣೆಗೆ ಗುರಿ ಮಾಡಲು ಸಾಕು.

ಕನ್ನಡ ಕಲಾವಿದೆ ಜಯಮಾಲಾ ಅವರಂತೆ, ಪುರುಷರಿಗೆ ಮಾತ್ರವಿರುವ ಕೇರಳದ ಶ್ರೀ ಕೋವಿಲ್ (ಗರ್ಭಗುಡಿ) ಅನ್ನು ಪ್ರವೇಶಿರುವುದಾಗಿ ಇತರ ಮಹಿಳೆಯರೂ ಹೇಳಿದ್ದಾರೆ. ದೇವಾಲಯದ ಕಟ್ಟುನಿಟ್ಟಿನ ಪ್ರವೇಶ ಸಂಹಿತೆಯ ಪ್ರಕಾರ ಇರುವ ಪುರುಷರು ಮಾತ್ರ ಅಯ್ಯಪ್ಪಸ್ವಾಮಿ ದೇವಾಲಯಕ್ಕೆ ಯಾತ್ರೆ ಕೈಗೊಳ್ಳಲು ಪರಿಶುದ್ಧರು. ಸ್ತ್ರೀಯರಿಗೆ ಸಂಬಂಧಿಸಿದಂತೆ, ಋತಿಮತಿಯಾಗದ ಹುಡಗಿಯರು ಮತ್ತು ಋತುಸ್ರಾವನಿಂತ ಹೆಂಗಸರಿಗೆ ಮಾತ್ರ ಪ್ರವೇಶಾವಕಾಶವಿದೆ. ದೇಶದ ಅನೇಕ ದೇವಾಲಯಗಳಲ್ಲಿ ಗರ್ಭಾಂಕಣಕ್ಕೆ ಹೀಗೆ ಮಹಿಳೆಯರ ಪ್ರವೇಶ ನಿಷೇಧವಿದೆ.

ಪ್ರತ್ಯೇಕತೆಯನ್ನು ಅವಲಂಬಿಸದ ಪ್ರಬಲ ಧರ್ಮವಿರುವ ಒಂದು ದೇಶದಲ್ಲಿ ಅಷ್ಟು ಸೋಜಿಗದ ಸಂಗತಿ ಎನಿಸದಿರಬಹುದು. ಕೆಲವು ದೇವಾಲಯಗಳಲ್ಲಿ ಮಹಿಳೆಯರ ಪ್ರವೇಶವನ್ನು ಬಹಿರಂಗವಾಗಿ ನಿಷೇಧಿಸದಿದ್ದರೂ, ಅವುಗಲಲ್ಲಿ ಸಾಕಷ್ಟು ದೇವಾಲಯಗಳು ಮಹಿಳೆಯರು ತಮ್ಮ ತಿಂಗಳ ಋತುಚಕ್ರದ ದಿನಗಳಲ್ಲಿ ಪ್ರವೇಶಿಸಕೂಡದೆಂಬ ಕಟ್ಟುಪಾಡು ಹಾಕಿವೆ. ಇನ್ನು ಕೆಲವು ದೇವಾಲಯಗಳು ವಿದೇಶಿಯರು, ಕ್ರೈಸ್ತರು ಮತ್ತು ಮುಸ್ಲೀಮರಂತಹ ಇತರ ಧರ್ಮಗಳ ಜನರಿಗೂ ಪ್ರವೇಶ ನೀಡುವುದಿಲ್ಲ. ಕೆಲವು ದೇವಾಲಯಗಳಲ್ಲಿ ದೇವರ ದರ್ಶನಕ್ಕೆ ಬರುವವರು ಅಂಗಿ ಲುಂಗಿ ಧರಿಸಬಾರದೆಂದಿದ್ದರೆ, ಇನ್ನು ಕೆಲವು ಕಡೆ ಹೂವು-ಹಾರ ಧರಿಸಬಾರದೆಂದು ಹೇಳಲಾಗುತ್ತದೆ. ಇಂತಹ ನಿಯಮ ಗಳಿಗೆ ಲೆಕ್ಕವಿಲ್ಲ. ಆದರೆ ಆ ನಿಯಮಗಳು ತಮ್ಮದೇ ಆದ ವಿವಾದಗಳನ್ನು ಕಟ್ಟಿಕೊಂಡಿರುವುದೂ ನಿಜ.

ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದಾದ ಸವಾಯಿ ಮಾಧೋಪುರದ ಘುಶ್ಮೇಶ್ವರ ಮಹದೇಶ್ವರ ದೇವಾಲಯಕ್ಕೆ ೨೦೦೪ರವರೆಗೆ ಮಹಿಳೆಯರಿಗೆ ಪ್ರವೇಶವಿರಲಿಲ್ಲ. ಆಗ ರಾಜಸ್ಥಾನದ ಅಂದಿನ ಶಿಕ್ಷಣ ಸಚಿವ ಘನಶ್ಯಾಮ ತಿವಾರಿ ಅವರು ತಮ್ಮ ಪತ್ನಿ ಯೊಂದಿಗೆ ಹೋಗಿ ಪೂಜೆ ಸಲ್ಲಿಸಿದ್ದು ಒಂದು ದೊಡ್ಡ ರಂಪವಾಯಿತು. ಆದರೆ ಅದರ ಪರಿಣಾಮವಾಗಿ ಆ ದೇವಾಲಯದ ಬಾಗಿಲುಗಳು ಮಹಿಳೆಯರಿಗೂ ತೆರೆಯುವಂತಾಯಿತು.

ಇತರ ಕೆಲವು ದೇವಾಲಯಗಳಲ್ಲಿ ನಡೆಯುತ್ತಿರುವ ಪೂಜಾರಿಗಳ ಮತಾಚರಣೆಯ ಮಿತಿಕಲ್ಪನೆಯಿಂದಾಗಿ ಸರ್ಕಾರಕ್ಕೆ ಮುಜುಗರವಾಗುವುದೂ ಉಂಟು. ಕಳೆದ ನವೆಂಬರ್ ತಿಂಗಳಲ್ಲಿ ಪ್ರಸಿದ್ಧ ಪುರಿ ಜಗನ್ನಾಥ ದೇವಾಲಯದ ಪೂಜಾರಿಗಳು ಥೈಲಾಂಡಿನ ರಾಜಕುಮಾರಿ ಮಹಾಚಕ್ರಿ ಸಿರಿಧರ್ನ್ ಅವರ ಪ್ರವೇಶಕ್ಕೆ ಅವಕಾಶ ನೀಡಲಿಲ್ಲ. ವಾಸ್ತವವಾಗಿ ಆಕೆ ಪ್ರಸಿದ್ಧ ಸಂಸ್ಕೃತ ವಿದ್ವಾಂಸಳು. ಆಕೆ ಬೌದ್ಧ ಧರ್ಮದವಳೆಂಬ ಕಾರಣದಿಂದ ಪ್ರವೇಶ ನಿರಾಕರಿಸಲಾಯಿತು. 12ನೆಯ ಶತಮಾನದ ಈ ದೇವಾಲಯದ ನಿಯಮಗಳ ಪ್ರಕಾರ, ಮೂಲತಃ ಹಿಂದೂ ಆಗಿ ಹುಟ್ಟಿದವರು ಅಥವಾ ಭಾರತ ವಿಭಜನೆಗೆ ಮುನ್ನ ಬೌದ್ಧ, ಜೈನ ಅಥವಾ ಸಿಖ್ ಆಗಿ ಹುಟ್ಟಿದವರನ್ನು ಮಾತ್ರ ದೇವಾಲಯದ ಒಳಗೆ ಬಿಡಲಾಗುತ್ತದೆ. ಅಲ್ಲಿನ ಪೂಜಾರಿಗಳು ಎಷ್ಟು ಪ್ರಬಲರೆಂದರೆ, ವಸಾಹತು ಆಡಳಿತದ ಬ್ರಿಟಿಷರಾಗಲೀ, ಸ್ವತಂತ್ರ ಭಾರತದ ಇಂದಿರಾಗಾಂಧಿ ಆಡಳಿತವಾಗಲೀ ಆ ಪೂಜಾರಿಗಳನ್ನು ಕಡೆಗಣಿಸುವ ಧೈರ್ಯ ಮಾಡಲಿಲ್ಲ.

ಮತ್ತೊಂದು ಪ್ರಸಿದ್ಧ ದೇವಾಲಯ ಭುವನೇಶ್ವರದಲ್ಲಿರುವ ಲಿಂಗರಾಜ ದೇವಾಲಯ. ಅಲ್ಲೂ ಇಂತಹುದೇ ನಿಯಮಗಳಿವೆ. ಅಮೇರಿಕಾದಲ್ಲಿ ಜನಿಸಿದ ಪಮೇಲಾ ಕೆ. ಫ್ಲೆಗ್ ಎಂಬಾಕೆ ಭಾರತೀಯನನ್ನು ಮದುವೆಯಾಗಿ, ಹಿಂದೂ ಧರ್ಮವನ್ನು ಅವಲಂಬಿಸಿದ್ದರೂ ೧೧ನೆಯ ಶತಮಾನದ ಈ ದೇವಾಲಯಕ್ಕೆ ಪ್ರವೇಶ ನಿರಾಕರಿಸಲಾಯಿತು. ಆಕೆ ದೇವಾಲಯ ಆಡಳಿತದ ವಿರುದ್ಧ ದೂರು ಸಲ್ಲಿಸಿದರೂ ಪೋಲೀಸರು ಅಸಹಾಯಕರಾಗಿದ್ದರು.

ತಿರುಪತಿಯಲ್ಲಿ ಮಹಿಳೆಯರ ಬಗೆಗೆ ನಿರ್ಬಂಧವಿಲ್ಲ. ಅಲ್ಲಿನ ತಿರುಮಲ ದೇವಸ್ಥಾನದ ಸಿಬ್ಬಂದಿಯಲ್ಲಿ ಶೇಕಡಾ 30-40ರಷ್ಟು ಮಹಿಳೆಯರಿದ್ದಾರೆ. ಆದರೂ ಅವರ ಮುಟ್ಟಾದ ಸಂದರ್ಭದಲ್ಲು ಒಳ ಪ್ರಾಕಾರಕ್ಕೆ ಪ್ರವೇಶಿಸಕೂಡದೆಂದು ಅವರಿಗೆ ಸೂಚಿಸಲಾಗಿದೆ. ಉಳಿದ ಸಂದರ್ಭದಲ್ಲೂ ಯಾರೂ ವೆಂಕಟೇಶ್ವರ ಮೂರ್ತಿಯನ್ನು ಮುಟ್ಟುವಂತಿಲ್ಲ. ರಾಷ್ಟ್ರಾಧ್ಯಕ್ಷರೂ ಮತ್ತು ಪ್ರಧಾನಿ ಸಹ ತೀರ ಹತ್ತಿರವೆಂದರೆ ವಿಗ್ರಹಕ್ಕೆ ೮-೧೨ ಅಡಿಗಳವರೆಗೆ ಹೋಗಬಹುದು. ಈ ವಿಶೇಷ ವಿನಾಯಿತಿ ಯನ್ನು ಸೋನಿಯಾ ಗಾಂಧಿ ಆಂಧ್ರಪ್ರದೇಶದ ಮುಖ್ಯಮಂತ್ರಿ ರಾಜಶೇಖರ ರೆಡ್ಡಿ(ಅವರೂ ಕ್ರೈಸ್ತರೇ) ಅವರಿಗೆ ಕಲ್ಪಿಸಲಾಗಿತ್ತು. ಉಳಿದಂತೆ ಭಕ್ತಸಮೂಹ ವಿಗ್ರಹಕ್ಕೆ ೨೫ ಅಡಿ ದೂರದಲ್ಲೇ ನಿಲ್ಲಬೇಕು. ಇತರ ಧರ್ಮಗಳ ಜನರು ದೇವಾಲಯ ಪ್ರವೇಶಿಸ ಬಹುದಾದರೂ 'ಹಿಂದೂ ಧರ್ಮದಲ್ಲಿ ನಂಬಿಕೆ ಇದೆ' ಎಂದು ಪ್ರತಿಜ್ಞೆ ಮಾಡಬೇಕು. ರಾಷ್ಟ್ರಪತಿ ಅಬ್ದುಲ್ ಕಲಾಂ ಮತ್ತು ಸೋನಿಯಾ ಗಾಂಧಿ ಅವರೂ ಹಾಗೆ ಪ್ರತಿಜ್ಞೆ ಮಾಡಿ ಪ್ರವೇಶಿಸಬೇಕಾಯಿತೆಂದು ವರದಿಯಾಗಿದೆ.

ತಿರುಪತಿಗೆ ಮುಸ್ಲೀಮರು ಸಾಮಾನ್ಯ ಸಂದರ್ಶಕರು. ಒಬ್ಬ ಮುಸ್ಲಿಂ ಭಕ್ತ ವೆಂಕಟೇಶ್ವರನ 'ಅಷ್ಟದಳ ಪಾದಪದ್ಮಾರಾಧನಾ ಸೇವೆ'ಗಾಗಿ ೧೦೮ ಕಮಲದ ಹೂಗಳ ಒಂದು ಹರಕೆಯ ಪ್ರತಿಮೆಯನ್ನು ಆ ದೇವಸ್ಥಾನಕ್ಕೆ ದಾನ ಮಾಡಿದ್ದಾನೆ. ದೇವಾಲಯದಲ್ಲಿ ಲಾರ್ಡ್ ಮನ್ರೋನ ಗೌರವಾರ್ಥ ಮುನ್ರೋಲಿಂ ಶ್ಲೋಕ ಅಲ್ಲಿ ರೂಢಿಯಲ್ಲಿದೆ. ಲಾರ್ಡ್ ಮನ್ರೋ ಬ್ರಿಟಿಷರ ಕಾಲದಲ್ಲಿ ಮದರಾಸು ಪ್ರಾಂತ್ಯದ ಗೌರ್ನರ್ ಆಗಿದ್ದವನು.

ದೇವಾಲಯದ ಪಾರುಪಾತ್ಯೆಯಲ್ಲಿ ಮಾದಕ ದ್ರವ್ಯ

ಗಳು, ಮಾಂಸಾಹಾರ ಮತ್ತು ಪಾದರಕ್ಷೆಗಳ ಬಳಕೆಗೆ ಅವಕಾಶವಿಲ್ಲ. ಹೂವು ಭಗವಂತನಿಗಾಗಿಯೇ ಆಗಿರುವ ಸೃಷ್ಟಿಯಾದ ಕಾರಣ ದೇವರ ದರ್ಶನಕ್ಕೆ ಬರುವ ಭಕ್ತರು ಅವನ್ನು ಧರಿಸಬಾರದೆಂದು ತಿಳಿಸಲಾಗಿರುತ್ತದೆ. ಹಾಗೆಯೇ ಚರ್ಮದುಡಿಗೆ, ಹೆಲ್ಮೆಟ್, ಟೋಪಿ, ಪೇಟ ಹಾಗೂ ಹ್ಯಾಟುಗಳಿಗೂ ಅಲ್ಲಿ ಅವಕಾಶವಿಲ್ಲ. ಭಕ್ತರು ಎಲೆ ಅಡಿಕೆ ಮೆಲ್ಲಕೂಡದೆಂದು ಸೂಚಿಸಲಾಗಿರುತ್ತದೆ.

ಮೇಲೆ ಹೇಳಿದಂತಹ ನಿಯಮ-ನಿಬಂಧನೆಗಳು ಹಿಂದೂ ಧರ್ಮದ ದೇವಾಲಯಗಳಿಗಷ್ಟೇ ಸೀಮಿತವಾಗಿಲ್ಲ. ಶ್ರೀನಗರದಲ್ಲಿರುವ ಹಜಾರಿ ಬಾಲ್ ಮಂದಿರದಲ್ಲೂ 'ಪವಿತ್ರ ಅವಶೇಷ' ಇಟ್ಟಿರುವ ಕೊಠಡಿಗೆ ಮಹಿಳೆಯರು ಹೋಗುವಂತಿಲ್ಲ. ಆ ರಾಜ್ಯದ ಮುಸ್ಲಿಂ ಎಂಬ ಮಂಡಳಿಯ ಪ್ರಧಾನ ವ್ಯವಸ್ಥಾಪಕ ತಸ್ ದಬ್ ಹುಸೇನ್ ಮೀರ್ ಹೇಳುತ್ತಾರೆ. 'ಪವಿತ್ರ ಅವಶೇಷ ಇಟ್ಟಿರುವ ಕೊಠಡಿಯ ಪ್ರಾಕಾರದೊಳಗೆ ಯಾವ ಮಹಿಳೆಗೂ ಪ್ರವೇಶಾವಕಾಶವಿಲ್ಲ. ಆದರೆ ಮಂದಿರದ ಇತರ ಭಾಗಗಳಿಗೆ ಮುಸ್ಲಿಂ ಮಹಿಳೆಯರೂ ಸೇರಿದಂತೆ ಮುಸ್ಲಿಂಮೇತರ ಪುರುಷರ ಪ್ರವೇಶಕ್ಕೆ ಯಾವುದೇ ನಿಷೇಧ ಇಲ್ಲ. ಆದರೆ ಮುಸ್ಲೀಂ ಮಹಿಳೆಯರು ಪವಿತ್ರ ಕಾಬಾ ಪ್ರವೇಶಿಸಬಹುದಾಗಿದ್ದು, ಇಲ್ಲಿನ ನಿಷೇಧ ಮಹಿಳೆಯರ ವಿರುದ್ಧ ಭೇದ ಭಾವನೆ ಮಾಡಿದಂತಾಗಿದೆ' ಎಂದು ವಿಷಾದಿಸುತ್ತಾರೆ.

ಇಮಾಮ್-ಉ-ಖತೀಬ್-ಇ ದರ್ಗಾದ ಪರೀಷ್ ಮೌಲ್ವಿ ಬಷೀರ್ ಅಹಮದ ಫರೂಕಿ 'ಪವಿತ್ರ ಅವಶೇಷ ಇಟ್ಟಿರುವ ಪ್ರಾಕಾರಕ್ಕೆ ಮಹಿಳೆಯರು ಹೋಗಬಹುದು. ಆದರೆ ಅವರು ಇಸ್ಲಾಂ ಕಾನೂನಿನಲ್ಲಿ ಪರಿಶುದ್ಧರೆಂದು ಘೋಷಿಸಲ್ಪಟ್ಟಿರಬೇಕು' ಎನ್ನುತ್ತಾರೆ. ಮಸೀದಿಗಳಲ್ಲಿ ಮಹಿಳೆಯರು ಪ್ರಾರ್ಥನೆ ಸಲ್ಲಿಸಲು ಅವಕಾಶವಿದ್ದರೂ ಒಂದು ಪ್ರತ್ಯೇಕ ಆವರಣದಲ್ಲಿ ಮಾತ್ರ.

ಕುತೂಹಲದ ಸಂಗತಿಯೆಂದರೆ, ೨೦೦೦ ವರ್ಷದ ಹಿಂದಿನದೆಂದು ಹೇಳಲಾಗಿರುವ ಶಬರಿಮಲೈ ಅಯ್ಯಪ್ಪಸ್ವಾಮಿ ದೇವಾಲಯಕ್ಕೆ ಈ ಮಹಿಳಾ ಪ್ರವೇಶ ನಿಷೇಧ ನಿಯಮಗಳು ಯಾವಾಗ ಹುಟ್ಟಿಕೊಂಡವೆಂಬುದು ಈ ದೇವಾಲಯದ ಪ್ರಧಾನ ತಂತ್ರಿ(ಪೂಜಾರಿ) ಕುಟುಂಬಕ್ಕೂ ಸಹ ತಿಳಿಯದು. ಅವರಿಗೆ ಗೊತ್ತಿರುವುದೆಂದರೆ, 'ಅಯ್ಯಪ್ಪ ಬ್ರಹ್ಮಚಾರಿ ಮತ್ತು ಅವನ ಸಾಕು ತಾಯಿಯಿಂದ ಪಟ್ಟ ಕಟುಅನುಭಾವದಿಂದಾಗಿ ಸ್ತ್ರೀಯರ ಬಗೆಗೆ ಅವನಿಗೆ ವಿಶ್ವಾಸವಿಲ್ಲ' ಎನ್ನುವುದಿಷ್ಟೆ.

ಆದರೆ, ಬೆಂಗಳೂರಿನಲ್ಲಿರುವ ಸಮಾಜ ಶಾಸ್ತ್ರ ತಜ್ಞ ಜಿ.ಆರ್. ಕಾರಂತ್ ಅವರು 'ಹಿಂದುತ್ವದ ಅಸ್ತಿತ್ವ ಶಕ್ತಿಯೇ ಈ (ಸ್ತ್ರೀ ಪುರುಷ) ಪ್ರತ್ಯೇಕತೆ. ನಾನು ಯಾರೊಬ್ಬರ ನಂಬಿಕೆ-ಶ್ರದ್ಧೆಗಳ ಮಧ್ಯೆ ಪ್ರವೇಶ ಮಾಡದಿದ್ದರೂ, ಈ ಪದ್ಧತಿ ಬದಲಾಗಬೇಕು ಎಂಬ ನಂಬಿಕೆಯವನು. 'ಅಕಸ್ಮಿಕವಾಗಿ ನಾನು ಅಯ್ಯಪ್ಪನ ಪಾದ ಸ್ಪರ್ಶಮಾಡಿದೆ' ಎಂದು ಜಯಮಾಲಾ ಧೈರ್ಯದಿಂದ ಹೇಳಿರುವುದಕ್ಕೆ ನಾನು ಹರ್ಷಿಸುತ್ತೇನೆ. ಆಕೆ ಅಲ್ಲಿಗೆ ಹೋದುದು ಈ ಪೂಜಾರಿಗಳಿಗೆ ತಿಳಿಯದ ವಿಷಯವೇನಲ್ಲ. ಅವರ ಗಮನಕ್ಕೆ ಬಾರದೆ ಆ ಘಟನೆ ನಡೆಯಲು ಸಾಧ್ಯವಿಲ್ಲ. ಈಗ ಅವರು ಧರ್ಮ ಶ್ರದ್ಧೆಯ ಸಭ್ಯರಂತೆ ನಟಿಸಲಾಗದು' ಎನ್ನುತ್ತಾರೆ.

ಜಗನ್ನಾಥ ದೇವಾಲಯದ ಬಗೆಗೆ ವಿಶೇಷ ಅಧ್ಯಯನ ನಡೆಸಿರುವ ತಜ್ಞ ಸಾಮೇಂದ್ರ ಮುದಲಿ ಅವರು 'ದೇವಾಲಯಕ್ಕೆ ವಿದೇಶಿಯರು, ಮುಸ್ಲೀಮರು ಮತ್ತು ಕ್ರೈಸ್ತರ ಪ್ರವೇಶ ನಿಷೇಧಿಸಿರುವುದು, ಮುಖ್ಯವಾಗಿ ಅವರೆಲ್ಲ ಹಿಂದೂಗಳು ನಿಷೇಧಿಸಿರುವ ಮಾಂಸಾಹಾರ ಸೇವಿಸುತ್ತಾರೆ ಎಂಬ ಕಾರಣದಿಂದ ಎಂದು ನಂಬಲಾಗಿದೆ. ಭದ್ರತೆಯ ಉದ್ದೇಶ ಮಾತ್ರವಲ್ಲದೆ ನಂಬಿಕೆ ಇಲ್ಲದವರ ಪ್ರವೇಶ ದೇವಾಲಯದ ಆವರಣ ಮತ್ತು 'ಭೋಗ್' ಅ ನ್ನು ಅಪವಿತ್ರಗೊಳಿಸುತ್ತದೆ ಎಂದು ಪೂಜಾರಿಗಳು ನಂಬಿದ್ದಾರೆ. ದೇಶದ ಇತರ ಭಾಗಗಳಲ್ಲಿ ನಡೆಯುವ ವಾರ್ಷಿಕ ರಥೋತ್ಸವಗಳಲ್ಲಿ ಯಾರಾದರೂ ಪಾಲುಗೊಳ್ಳಬಹುದು. ದೇವರ ದರ್ಶನಕ್ಕೆ ದೇವಾಲಯ ಪ್ರವೇಶ ನಿರಾಕರಿಸಲ್ಪಟ್ಟವರು ಬೇರೆ ಕಡೆ ದರ್ಶನ ಮಾಡಬಹುದು ಎಂಬ ಕಾರಣದಿಂದ ಈ ರಥೋತ್ಸವ ಸಂದರ್ಭದ ಅವಕಾಶ' ಎಂದು ಹೇಳುತ್ತಾರೆ.

'ಕ್ಯಾಥೋಲಿಕ್ ಚರ್ಚ್‌ನವರೂ ಸಹ ಗರ್ಭನಿರೋಧ ಮತ್ತು ಜನನ ನಿಯಂತ್ರಣದಂತಹ ವಿಷಯಗಳ ಬಗೆಗೆ ಈಗ ಸಣ್ಣ ಪುಟ್ಟ ಹೊಂದಾಣಿಕೆಗಳನ್ನು ಮಾಡಿಕೊಂಡಿದ್ದಾರೆ. ಆದ್ದರಿಂದ ಮುಟ್ಟಾದ ಹೆಂಗಸರು ಮತ್ತಿತರರು ದೇವಾಲಯಗಳನ್ನು ಪ್ರವೇಶಿಸಬಾರದೆಂಬ ಹಳೆಕಾಲದ ನಂಬಿಕೆಗಳನ್ನು ಬಿಟ್ಟುಬಿಡಬೇಕು' ಎಂದು ಹೇಳುವ ಕಾರಂತರು 'ಪೂಜಾರಿಗಳು ಜನರನ್ನು ದೂರವಿಟ್ಟು ತಮ್ಮ ಅಧಿಕಾರ ಉಳಿಸಿಕೊಂಡಿದ್ದಾರೆ. ಅವರು ನೀಡುವ ಪ್ರಸಾದ ಪರಿಶುದ್ಧವೆಂಬ ಬಗೆಗೆ ಅವರಿಗೆ ಹೇಗೆ ಖಚಿತವಾಗಿದೆ? ಅ ಪ್ರಸಾದ ತಯಾರಿಸಲು ಬೇಕಾದ ಅಕ್ಕಿಯನ್ನು ಮುಟ್ಟಾದ ಹೆಂಗಸರು ಕೂಡಿಕೊಂಡು ಕುಟ್ಟುವುದಿಲ್ಲವೆ? ಈ ಪೂಜಾರಿಗಳ ಮನೆಯಲ್ಲಿ ಹೆಂಗಸರಿಲ್ಲವೆ? ಹೀಗಿರುವಾಗ ಒಬ್ಬ ವ್ಯಕ್ತಿ ಮುಟ್ಟಾದ ಮಾತ್ರಕ್ಕೆ ದೇವರ ಮೂರ್ತಿ ಅಪವಿತ್ರಗೊಳ್ಳುವುದಾದರೂ ಹೇಗೆ ? ಎಂದು ಪ್ರಶ್ನಿಸುತ್ತಾರೆ.

*- (ಮುಂದುವರೆಯುತ್ತದೆ)*





# ವಚನಗಳಲ್ಲಿ ಆರೋಗ್ಯ ಪ್ರಜ್ಞೆ

- ಜಿ.ಕೆ. ಕುಲಕರ್ಣಿ
ಆರೋಗ್ಯ ಶಿಕ್ಷಣಾಧಿಕಾರಿಗಳು, ಜಿಲ್ಲಾ ತರಬೇತಿ ಕೇಂದ್ರ, ಜಿಲ್ಲಾ ಆಸ್ಪತ್ರೆ ಆವರಣ, ತುಮಕೂರು.

ಸಾಹಿತ್ಯದಲ್ಲಿ ಆಯಾ ಕಾಲದ ಜೀವನದ ಪ್ರತಿಬಿಂಬವನ್ನು ಕಾಣುವುದು ಸ್ವಾಭಾವಿಕ. ಶರಣರ ವಚನಗಳಲ್ಲಿ ಭಕ್ತಿಯ ಉತ್ಕಟತೆಯೊಂದಿಗೆ ಆಯಾ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಜೀವನದ ಹೊಳವುಗಳನ್ನು ಕಾಣಬಹುದು. ಶರಣರು ತಮ್ಮ ವಚನಗಳಲ್ಲಿ ಉದ್ದೇಶಪೂರ್ವಕವಾಗಿ ಆರೋಗ್ಯದ ಬಗೆಗೆ ತಿಳಿಸದಿದ್ದರೂ ಪ್ರಾಸಂಗಿಕ ಆರೋಗ್ಯ ಕುರಿತು ತಮ್ಮ ಅನಿಸಿಕೆಗಳನ್ನು ಅವರು ತಮ್ಮ ವಚನಗಳಲ್ಲಿ ವ್ಯಕ್ತ ಮಾಡಿರುವುದು ಕಂಡು ಬರುತ್ತದೆ. ಇಂದಿನವರೆಗಿಂತಲೂ ಹಿಂದಿನವರಲ್ಲಿ ಆರೋಗ್ಯ ಪ್ರಜ್ಞೆ ಹೆಚ್ಚು ಜಾಗ್ರತವಾಗಿತ್ತು ಎಂಬುದನ್ನು ಶರಣರ ವಚನಗಳಲ್ಲಿ ಗುರುತಿಸಬಹುದು.

ಒಂದು ವಚನದಲ್ಲಿ ಅಣ್ಣ ಬಸವಣ್ಣನವರು ಹೀಗೆ ಹೇಳುತ್ತಾರೆ.

*ಅರ್ಥರೇಖೆ ಇದ್ದಲ್ಲಿ ಫಲವೇನು ?*
*ಆಯುಷ್ಯರೇಖೆ ಇಲ್ಲದನ್ನಕ್ಕ ?*
*ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು?*
*ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು?*
*ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು?*
*ನಮ್ಮ ಕೂಡಲ ಸಂಗನ ಶರಣರನರಿಯದವರ ಕೈಯಲ್ಲಿ ಲಿಂಗವಿದ್ದು ಫಲವೇನು? ಶಿವಪಥವನರಿಯನ್ನಕ್ಕ.*

ಶಿವಪಥವ ಅರಿಯುವ ಆಧ್ಯಾತ್ಮಿಕ ವಿಷಯದ ಬಗೆಗೆ ಉಪಮೆಗಳನ್ನು ಕೊಡುತ್ತಲೇ ಮಾನವನ ಆಯುಷ್ಯದ ಬಗೆಗೆ ಬಸವಣ್ಣ ಸೂಚಿಸುತ್ತಾರೆ. ಆಯುಷ್ಯರೇಖೆ ಇಲ್ಲವೆಂದಮೇಲೆ ಯಾವ ಸಂಪತ್ತಿದ್ದರೂ, ನಿರರ್ಥಕ ಎನ್ನುವ ಭಾವನೆ ಈ ವಚನದಲ್ಲಿ ಎದ್ದು ಕಾಣುತ್ತದೆ. 'Helath is an asset' ಎನ್ನುವ ನಮ್ಮ ಇಂದಿನ ಪ್ರಜ್ಞೆ ಎಂಟುನೂರು ವರ್ಷಗಳ ಹಿಂದೆಯೇ ಇತ್ತು. 'ಶರೀರಮಾಧ್ಯಂ ಖಲುಧಾರ್ಮಸಾಧನಂ' ಎನ್ನುವ ಉಕ್ತಿಯಂತೆ ಧರ್ಮಸಾಧನೆಗೆ ಶರೀರ ಸ್ವಾಸ್ಥ್ಯ ಬಹು ಮುಖ್ಯ. ಇಂದು ಮಾನವನ ಆಯುಷ್ಯ ವೃದ್ಧಿಯಾಗಿದೆ. ಆದರೆ ಅದೇ ಪ್ರಮಾಣದಲ್ಲಿ ಆರೋಗ್ಯ ವೃದ್ಧಿಯಾಗಿಲ್ಲ.

ಒಂದೆಡೆ ಅಕ್ಕಮಹಾದೇವಿಯವರು ವಚನದಲ್ಲಿ ಮನುಷ್ಯನ ಬದುಕಿನ ಬಗೆಗೆ ವಿವರಿಸುತ್ತ- ಹಗಲು ನಾಲ್ಕು ಜಾವ ಅಸನಕ್ಕೆ ಕುದಿವರು, ಇರುಳುನಾಲ್ಕು ಜಾವ ವ್ಯಸನಕ್ಕೆ ಕುದಿವರು ಎನ್ನುತ್ತಾರೆ. ಪ್ರತಿಯೊಬ್ಬ ಹುಟ್ಟಿದ ಮನುಷ್ಯ ಸಾಯಲೇಬೇಕು. ಸಾವು ತಪ್ಪಿಸಲು ಅಸಾಧ್ಯ. ಆದ್ದರಿಂದಲೇ ಅಕ್ಕ ಎನ್ನುತ್ತಾಳೆ- 'ಕುಟ್ಟಿದ ಕೆರೆಗೆ ಕೋಡಿ ಮಾಣದು, ಹುಟ್ಟಿದ ಪ್ರಾಣಿಗೆ ಪ್ರಳಯ ತಪ್ಪದಿನ್ನೆಂತಯ್ಯ'. ಅಕ್ಕ ಮಹಾದೇವಿಯವರ ಇನ್ನೊಂದು ವಚನದ ಒಂದು ಭಾಗವನ್ನು ಪರಿಶೀಲಿಸೋಣ.

*ಆಹಾರವ ಕಿರಿದು ಮಾಡಿರಯ್ಯ*
*ಆಹಾರವ ಕಿರಿದು ಮಾಡಿ*
*ಆಹಾರದಿಂ ವ್ಯಾಧಿ ಹುಟ್ಟಿ ಬಲಿವುದಯ್ಯ*
*ಆಹಾರದಿಂ ನಿದ್ರೆ, ತಾಮಸ, ಮೈಮರವು,*
*ತಾಮಸದಿಂ ಅಜ್ಞಾನ ಹೆಚ್ಚಿ ಕಾಮವಿಕಾರ*
*ಮನೋವಿಕಾರ ಭಾವ ವಿಕಾರ ಇಂದ್ರಿಯ ವಿಕಾರ*
*ವಾಯುವಿಕಾರ ಇಂಥ ಪಂಚ ವಿಕಾರಗಳನ್ನುಂಟುಮಾಡಿ*
*ಸೃಷ್ಟಿಗೆ ತಹುದಾದ ಕಾರಣ ಕಾಯದ ಅತಿ ಪೋಷಣೆ*
*ಮೃತ್ಯು. ಎಂದುದು.*

ಚನ್ನಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಭೂಮಿಗೆ ಬಂದಿರುವ ಈ ಕಾಯವನ್ನು ಉಳಿಸಿಕೊಳ್ಳುವುದು ಅಷ್ಟೇ ಮುಖ್ಯವಾಗಿದೆ. ಈ ದೇಹ ನಾಶವಾದರೆ ಅಥವಾ ರೋಗಗಳಿಂದ ಶಿಥಿಲವಾದರೆ ದೇವರನ್ನು ಒಲಿಸಿಕೊಳ್ಳುವುದು ಕಷ್ಟವಾಗುತ್ತದೆ. ಅತಿ ಶ್ರೇಷ್ಠವಾದ ಆರೋಗ್ಯಪ್ರಜ್ಞೆ ಈ ವಚನದಲ್ಲಿ ಕಂಡು ಬರುತ್ತದೆ. ಅತಿ ಆಹಾರ ಸೇವನೆಯಿಂದ ಆಗುವ ತೊಂದರೆಗಳನ್ನು ಆಧುನಿಕ ವೈದ್ಯಕೀಯ ರಂಗ ಕಂಡುಹಿಡಿಯುವುದಕ್ಕಿಂತ ನೂರಾರು ವರ್ಷಗಳ ಮೊದಲೇ ಅಕ್ಕನ ವಚನಗಳಲ್ಲಿ ಅದು ವ್ಯಕ್ತವಾಗಿದೆ. ಅತಿ ಆಹಾರ ಸೇವನೆಯಿಂದ ಬೊಜ್ಜು ಸಂಗ್ರಹವಾಗುತ್ತದೆ. ಬೊಜ್ಜಿನಿಂದಾಗಿ ರಕ್ತನಾಳಗಳಲ್ಲಿ ಕೊಬ್ಬಿನ ಸಂಗ್ರಹ ಕೊಲೆಸ್ಟ್ರಾಲ್ ಪ್ರಮಾಣ ಜಾಸ್ತಿ. ಒಂದಕ್ಕೊಂದು ಸರಪಳಿ ಕ್ರಿಯೆಯಂತೆ ಮಧುಮೇಹ, ರಕ್ತದ ಒತ್ತಡ ಮತ್ತು ಹೃದಯಾಘಾತದಂತಹ ರೋಗಗಳು ಕಂಡು ಬರುತ್ತವೆ. ದೇಹದ ತೂಕ ಹೆಚ್ಚಾದಂತೆ ಕೀಲು ನೋವುಗಳು ತನ್ನಷ್ಟಕ್ಕೆ ತಾನೇ ಕಂಡು ಬರುತ್ತವೆ. ವ್ಯಕ್ತಿಯಲ್ಲಿ ದೈಹಿಕ ರೋಗಗಳಲ್ಲದೆ ಕೀಳರಿಮೆಯಂತಹ ಮನೋರೋಗಗಳು ಕಂಡು ಬರುತ್ತವೆಂಬುದನ್ನು ತುಂಬಾ ಸ್ಪಷ್ಟವಾಗಿ ಒಬ್ಬ ತಜ್ಞ ವೈದ್ಯೆಯಂತೆ ಅಕ್ಕಮಹಾದೇವಿ ತನ್ನ ವಚನದಲ್ಲಿ ಆರೋಗ್ಯ ಪ್ರಜ್ಞೆಯನ್ನು ವ್ಯಕ್ತಮಾಡಿದ್ದಾಳೆ.

ಚನ್ನಬಸವಣ್ಣನವರ 'ಕರಣಹಸಿಗೆ'ಯಂತೂ ಪೂರ್ಣವಾಗಿ

# ವಚನಗಳಲ್ಲಿ ಆರೋಗ್ಯ ಪ್ರಜ್ಞೆ

– ಜಿ.ಕೆ. ಕುಲಕರ್ಣಿ
ಆರೋಗ್ಯ ಶಿಕ್ಷಣಾಧಿಕಾರಿಗಳು, ಜಿಲ್ಲಾ ತರಬೇತಿ ಕೇಂದ್ರ, ಜಿಲ್ಲಾ ಆಸ್ಪತ್ರೆ ಆವರಣ, ತುಮಕೂರು.

ಸಾಹಿತ್ಯದಲ್ಲಿ ಆಯಾ ಕಾಲದ ಜೀವನದ ಪ್ರತಿಬಿಂಬವನ್ನು ಕಾಣುವುದು ಸ್ವಾಭಾವಿಕ. ಶರಣರ ವಚನಗಳಲ್ಲಿ ಭಕ್ತಿಯ ಉತ್ಕಟತೆಯೊಂದಿಗೆ ಆಯಾ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಜೀವನದ ಹೊಳವುಗಳನ್ನು ಕಾಣಬಹುದು. ಶರಣರು ತಮ್ಮ ವಚನಗಳಲ್ಲಿ ಉದ್ದೇಶಪೂರ್ವಕವಾಗಿ ಆರೋಗ್ಯದ ಬಗೆಗೆ ತಿಳಿಸದಿದ್ದರೂ ಪ್ರಾಸಂಗಿಕ ಆರೋಗ್ಯ ಕುರಿತು ತಮ್ಮ ಅನಿಸಿಕೆಗಳನ್ನು ಅವರು ತಮ್ಮ ವಚನಗಳಲ್ಲಿ ವ್ಯಕ್ತ ಮಾಡಿರುವುದು ಕಂಡು ಬರುತ್ತದೆ. ಇಂದಿನವರಿಗಿಂತಲೂ ಹಿಂದಿನವರಲ್ಲಿ ಆರೋಗ್ಯ ಪ್ರಜ್ಞೆ ಹೆಚ್ಚು ಜಾಗ್ರತವಾಗಿತ್ತು ಎಂಬುದನ್ನು ಶರಣರ ವಚನಗಳಲ್ಲಿ ಗುರುತಿಸಬಹುದು.

ಒಂದು ವಚನದಲ್ಲಿ ಅಣ್ಣ ಬಸವಣ್ಣನವರು ಹೀಗೆ ಹೇಳುತ್ತಾರೆ.

*ಅರ್ಥರೇಖೆ ಇದ್ದಲ್ಲಿ ಫಲವೇನು ?*
*ಆಯುಷ್ಯರೇಖೆ ಇಲ್ಲದನ್ನಕ್ಕ ?*
*ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು?*
*ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು?*
*ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು?*
*ನಮ್ಮ ಕೂಡಲ ಸಂಗನ ಶರಣರನರಿಯದವರ ಕೈಯಲ್ಲಿ ಲಿಂಗವಿದ್ದು ಫಲವೇನು? ಶಿವಪಥವನರಿಯನ್ನಕ್ಕ-*

ಶಿವಪಥವ ಅರಿಯುವ ಆಧ್ಯಾತ್ಮಿಕ ವಿಷಯದ ಬಗೆಗೆ ಉಪಮೆಗಳನ್ನು ಕೊಡುತ್ತಲೇ ಮಾನವನ ಆಯುಷ್ಯದ ಬಗೆಗೆ ಬಸವಣ್ಣ ಸೂಚಿಸುತ್ತಾರೆ. ಆಯುಷ್ಯರೇಖೆ ಇಲ್ಲವೆಂದಮೇಲೆ ಯಾವ ಸಂಪತ್ತಿದ್ದರೂ, ನಿರರ್ಥಕ ಎನ್ನುವ ಭಾವನೆ ಈ ವಚನದಲ್ಲಿ ಎದ್ದು ಕಾಣುತ್ತದೆ. 'Helath is an asset' ಎನ್ನುವ ನಮ್ಮ ಇಂದಿನ ಪ್ರಜ್ಞೆ ಎಂಟುನೂರು ವರ್ಷಗಳ ಹಿಂದೆಯೇ ಇತ್ತು. 'ಶರೀರಮಾದ್ಯಂ ಖಲುಧರ್ಮಸಾಧನಂ' ಎನ್ನುವ ಉಕ್ತಿಯಂತೆ ಧರ್ಮಸಾಧನೆಗೆ ಶರೀರ ಸ್ವಾಸ್ಥ್ಯ ಬಹು ಮುಖ್ಯ. ಇಂದು ಮಾನವನ ಆಯುಷ್ಯ ವೃದ್ಧಿಯಾಗಿದೆ. ಆದರೆ ಅದೇ ಪ್ರಮಾಣದಲ್ಲಿ ಆರೋಗ್ಯ ವೃದ್ಧಿಯಾಗಿಲ್ಲ.

ಒಂದೆಡೆ ಅಕ್ಕಮಹಾದೇವಿಯವರು ವಚನದಲ್ಲಿ ಮನುಷ್ಯನ ಬದುಕಿನ ಬಗೆಗೆ ವಿವರಿಸುತ್ತ- ಹಗಲು ನಾಲ್ಕು ಜಾವ ಆಸನಕ್ಕೆ ಕುದಿವರು, ಇರುಳುನಾಲ್ಕು ಜಾವ ವ್ಯಸನಕ್ಕೆ ಕುದಿವರು ಎನ್ನುತ್ತಾರೆ. ಪ್ರತಿಯೊಬ್ಬ ಹುಟ್ಟಿದ ಮನುಷ್ಯ ಸಾಯಲೇಬೇಕು. ಸಾವು ತಪ್ಪಿಸಲು ಅಸಾಧ್ಯ. ಆದ್ದರಿಂದಲೇ ಅಕ್ಕ ಎನ್ನುತ್ತಾಳೆ- 'ಕುಟ್ಟಿದ ಕೆರೆಗೆ ಕೋಡಿ ಮಾಣದು, ಹುಟ್ಟಿದ ಪ್ರಾಣಿಗೆ ಪ್ರಳಯ ತಪ್ಪದಿನ್ನೆಂತಯ್ಯ' ಅಕ್ಕ ಮಹಾದೇವಿಯವರ ಇನ್ನೊಂದು ವಚನದ ಒಂದು ಭಾಗವನ್ನು ಪರಿಶೀಲಿಸೋಣ.

*ಆಹಾರವ ಕಿರಿದು ಮಾಡಿರಯ್ಯ*
*ಆಹಾರವ ಕಿರಿದು ಮಾಡಿ*
*ಆಹಾರದಿಂ ವ್ಯಾಧಿ ಹುಟ್ಟಿ ಬಲಿವುದಯ್ಯ*
*ಆಹಾರದಿಂ ನಿದ್ರೆ, ತಾಮಸ, ಮೈಮರವು,*
*ತಾಮಸದಿಂ ಅಜ್ಞಾನ ಹೆಚ್ಚಿ ಕಾಮವಿಕಾರ*
*ಮನೋವಿಕಾರ ಭಾವ ವಿಕಾರ ಇಂದ್ರಿಯ ವಿಕಾರ*
*ವಾಯುವಿಕಾರ ಇಂಥ ಪಂಚ ವಿಕಾರಗಳನ್ನುಂಟುಮಾಡಿ*
*ಸೃಷ್ಟಿಗೆ ತಹುದಾದ ಕಾರಣ ಕಾಯದ ಅತಿ ಪೋಷಣೆ*
*ಮೃತ್ಯು ಎಂದುದು.*

ಚನ್ನಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಭೂಮಿಗೆ ಬಂದಿರುವ ಈ ಕಾಯವನ್ನು ಉಳಿಸಿಕೊಳ್ಳುವುದು ಅಷ್ಟೇ ಮುಖ್ಯವಾಗಿದೆ. ಈ ದೇಹ ನಾಶವಾದರೆ ಅಥವಾ ರೋಗಗಳಿಂದ ಶಿಥಿಲವಾದರೆ ದೇವರನ್ನು ಒಲಿಸಿಕೊಳ್ಳುವುದು ಕಷ್ಟವಾಗುತ್ತದೆ. ಅತಿ ಶ್ರೇಷ್ಠವಾದ ಆರೋಗ್ಯಪ್ರಜ್ಞೆ ಈ ವಚನದಲ್ಲಿ ಕಂಡು ಬರುತ್ತದೆ. ಅತಿ ಆಹಾರ ಸೇವನೆಯಿಂದ ಆಗುವ ತೊಂದರೆಗಳನ್ನು ಆಧುನಿಕ ವೈದ್ಯಕೀಯ ರಂಗ ಕಂಡುಹಿಡಿಯುವುದಕ್ಕಿಂತ ನೂರಾರು ವರ್ಷಗಳ ಮೊದಲೇ ಅಕ್ಕನ ವಚನಗಳಲ್ಲಿ ಅದು ವ್ಯಕ್ತವಾಗಿದೆ. ಅತಿ ಆಹಾರ ಸೇವನೆಯಿಂದ ಬೊಜ್ಜು ಸಂಗ್ರಹವಾಗುತ್ತದೆ. ಬೊಜ್ಜಿನಿಂದಾಗಿ ರಕ್ತನಾಳಗಳಲ್ಲಿ ಕೊಬ್ಬಿನ ಸಂಗ್ರಹ ಕೊಲೆಸ್ಟ್ರಾಲ್ ಪ್ರಮಾಣ ಜಾಸ್ತಿ. ಒಂದಕ್ಕೊಂದು ಸರಪಳಿ ಕ್ರಿಯೆಯಂತೆ ಮಧುಮೇಹ, ರಕ್ತದ ಒತ್ತಡ ಮತ್ತು ಹೃದಯಾಘಾತದಂತಹ ರೋಗಗಳು ಕಂಡು ಬರುತ್ತವೆ. ದೇಹದ ತೂಕ ಹೆಚ್ಚಾದಂತೆ ಕೀಲು ನೋವುಗಳು ತನ್ನಷ್ಟಕ್ಕೆ ತಾನೇ ಕಂಡು ಬರುತ್ತವೆ. ವ್ಯಕ್ತಿಯಲ್ಲಿ ದೈಹಿಕ ರೋಗಗಳಲ್ಲದೆ ಕೀಳರಿಮೆಯಂತಹ ಮನೋರೋಗಗಳು ಕಂಡು ಬರುತ್ತವೆಂಬುದನ್ನು ತುಂಬಾ ಸ್ಪಷ್ಟವಾಗಿ ಒಬ್ಬ ತಜ್ಞ ವೈದ್ಯೆಯಂತೆ ಅಕ್ಕಮಹಾದೇವಿ ತನ್ನ ವಚನದಲ್ಲಿ ಆರೋಗ್ಯ ಪ್ರಜ್ಞೆಯನ್ನು ವ್ಯಕ್ತಮಾಡಿದ್ದಾಳೆ.

ಚನ್ನಬಸವಣ್ಣನವರ 'ಕರಣಹಸಿಗೆ'ಯಂತೂ ಪೂರ್ಣವಾಗಿ





ದೇಹದ ಬಗೆಗೆ ವಿವರಿಸುತ್ತದೆ. ವಚನಕಾರರಲ್ಲಿ ವೈದ್ಯ ಸಂಗಣ್ಣ ಎನ್ನುವವರು ಆಗಿಹೋಗಿದ್ದಾರೆ. ಇವರ ಎಲ್ಲಾ ವಚನಗಳು ಲಭ್ಯವಾಗಿಲ್ಲ. ಆರೋಗ್ಯಕ್ಕೆ ಸಂಬಂಧಿಸಿದ ಹಲವಾರು ಅಂಶಗಳು ಆಧ್ಯಾತ್ಮದೊಂದಿಗೆ ಕೂಡಿಕೊಂಡಿರುವುದನ್ನು ಇವರ ವಚನಗಳಲ್ಲಿ ಕಾಣಬಹುದು.

ಶರಣರ ಕಾಲದ ನಂತರ ಬರುವ ಖ್ಯಾತ ವಚನಕಾರನೆಂದರೆ ಸರ್ವಜ್ಞ. ವಚನಕ್ಕೆ ಇನ್ನೊಂದು ಹೆಸರೇ ಸರ್ವಜ್ಞ. 15–16ನೇ ಶತಮಾನದಲ್ಲಿ ಆಗಿ ಹೋಗಿರುವ ಸರ್ವಜ್ಞ ಸಮಾಜದಲ್ಲಿ ಕಂಡುಬರುವ ಎಲ್ಲಾ ಒಳಿತುಕೆಡಕುಗಳನ್ನು ತನ್ನ ವಚನಗಳಲ್ಲಿ ಚಿತ್ರಿಸಿದ್ದಾನೆ. ಯಾವುದೇ ಮತಕ್ಕೆ ಸಂಬಂಧ ಪಡದೆ, ಯಾವುದೇ ಪೀಠವನ್ನು ಏರದ ಸರ್ವಜ್ಞ ಇಷ್ಟು ಜನಪ್ರಿಯನಾಗಲು ಕಾರಣ ಅವನು ಜನರಿಗೆ ಹತ್ತಿರವಾಗಿರುವ ವಿಷಯಗಳ ಬಗೆಗೆ ವಚನದಲ್ಲಿ ಪ್ರಸ್ತಾಪಿಸಿರುವುದೇ ಎಂದು ಹೇಳಬಹುದು. ಮನುಷ್ಯನಿಗೆ ಬರುವ ರೋಗಗಳಲ್ಲಿ 80% ಆಹಾರ ಮತ್ತು ನೀರಿನ ದೋಷಗಳೇ ಕಾರಣ ಎಂಬುದು ಸಾಬೀತಾಗಿದೆ. ಆಹಾರದ ಬಗೆಗೆ ಅದನ್ನ ಸೇವಿಸುವ ಕ್ರಮದ ಬಗೆಗೆ ಆಹಾರಕ್ಕೆ ಮತ್ತು ಆರೋಗ್ಯಕ್ಕೆ ಇರುವ ಸಂಬಂಧಗಳ ಬಗೆಗೆ ಸರ್ವಜ್ಞ ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ.

ಆಧುನಿಕ ಯುಗದಲ್ಲಿ ಆರೋಗ್ಯದಿಂದ ಇರಬೇಕಾದರೆ ನಮ್ಮ ಜೀವನ ಶೈಲಿಯಲ್ಲಿ ಮಾರ್ಪಾಡು ಮಾಡಿಕೊಳ್ಳುವುದು ಬಹು ಮುಖ್ಯ. ಹುಟ್ಟಲಿರುವ ಮಗುವಿನ ಲಿಂಗ ಬದಲಿಸುವುದಾಗಲಿ, ವೃದ್ಧಾಪ್ಯವನ್ನ ತಡೆಗಟ್ಟುವುದಾಗಲಿ ಅಥವಾ ನಮ್ಮ ನಮ್ಮ ಕುಟುಂಬಗಳ ರೋಗದ ಇತಿಹಾಸ ಬದಲಿಸುವುದು ನಮ್ಮ ಕೈಯಲ್ಲಿ ಇಲ್ಲ. ಆದರೆ ಜೀವನ ಶೈಲಿ ಬದಲಿಸುವುದು ನಮ್ಮ ಕೈಯಲ್ಲಿ ಇಲ್ಲ. ಆದರೆ ಜೀವನ ಶೈಲಿ ಬದಲಿಸುವುದರಿಂದ ರಕ್ತದ ಒತ್ತಡ, ಕೊಲೆಸ್ಟರಾಲ್‌ಗಳನ್ನು ಕಡಿಮೆ ಮಾಡಿಕೊಳ್ಳಬಹುದು. ಯೋಗಾಸನ, ಪ್ರಾಣಾಯಾಮ, ಶರೀರ ಕ್ರಮ ಮತ್ತು ಸೂಕ್ತ ಆಹಾರಗಳಿಂದ ನಮ್ಮ ಇಡೀ ಜೀವನ ಶೈಲಿ ಬದಲಾಯಿಸಿ ರೋಗಗಳಿಂದ ಮತ್ತು ವೈದ್ಯರುಗಳಿಂದ ದೂರವಿರಬಹುದು. ಈ ನಿಟ್ಟಿನಲ್ಲಿ ಸರ್ವಜ್ಞನ ವಚನಗಳು ದಾರಿದೀಪವಾಗಿವೆ. ಕೆಲವು ವಚನಗಳನ್ನು ಪರಿಶೀಲಿಸೋಣ.

*ಉಂಡು ನೂರಡಿ ಎಣಿಸಿ, ಕೆಂಡಕ್ಕೆ ಕೈಕಾಸಿ*
*ಗಂಡು ಮೇಲಾಗಿ ಮಲಗಿದನು । ವೈದ್ಯ ನಾ*
*ಗಂಡ ಕಾಣಯ್ಯ ಸರ್ವಜ್ಞ*

ಉಂಡ ಮೇಲೂ ಸಹ ನೂರು ಅಡಿ ಇಡುವಷ್ಟು ಚೈತನ್ಯ ನಮ್ಮಲ್ಲಿರಬೇಕು. ಅಂದರೆ ಉಂಡ ಕೂಡಲೇ ಮಲಗಬಾರದು ಎನ್ನುವ ಸೂಚನೆ. ಅದರೊಂದಿಗೆ ಶರೀರಕ್ಕೆ ಶ್ರಮದ ಅವಶ್ಯಕತೆ ಇದೆ ಎನ್ನುವ ಸೂಚನೆ ಈ ವಚನದಲ್ಲಿ ಇದೆ.

*ಹಸಿವಿಲ್ಲದುಣಬೇಡ । ಹಸಿದು ಮತ್ತಿರಬೇಡ*
*ಬಸಿಗೂಡಿ ತಂಗಳುಣಬೇಡ । ವೈದ್ಯನಾ*
*ಬಸಸಲೇಬೇಡ ಸರ್ವಜ್ಞ*

ಇಂದಿನ ಅವಸರದ ಯುಗದಲ್ಲಿ ಎಷ್ಟೋ ಸಲ ಹಸಿವಿಲ್ಲದೇ ನಾವು ಉಣ್ಣುತ್ತೇವೆ. ಮಧ್ಯಾಹ್ನದ ಬಿಸಿಯೂಟದ ಜೊತೆ 'ಫ್ರಿಜ್'ದಲ್ಲಿಯ ತಂಪಾದ ಆಹಾರ ಉಪಯೋಗಿಸುತ್ತೇವೆ. ಅಲ್ಲದೇ ಬಿಸಿಬಿಸಿ ಊಟ ಉಂಡ ಮೇಲೆ ಐಸ್‌ಕ್ರೀಂ ತಿನ್ನುವಂತಹ ದುರಾಭ್ಯಾಸ ನಮ್ಮಲ್ಲಿದೆ. ಇದೆಲ್ಲ ಸರಿಯಾದ ಕ್ರಮವಾಗಿಲ್ಲ. ಅಪಚನ, ಆಮ್ಲ ಪಿತ್ತ ಮತ್ತು ಅರುಚಿಗಳಿಗೆ ದಾರಿಯಾಗುತ್ತದೆ.

*'ನಾಲಗೆಯ ಸವಿಸುಖಕ್ಕೆ ಚೀಲವನು ತುಂಬಿದಡೆ*
*ಶೂಲೆಗಳು ಹಲವು ತೆರನಾಗಿ ರುಜೆಗಳಿಂ*
*ಕಾಲನೊಶನಕ್ಕು ಸರ್ವಜ್ಞ'*

*'ನಾಲಗೆಯ ಕಟ್ಟಿಹನು ಕಾಲನಿಗೆ ದೂರನಹ*
*ನಾಲಗೆಯ ರುಚಿಯ ಮೇಲಾಡುತ್ತಿರಲವನ*
*ಕಾಲ ಹತ್ತಿರವು ಸರ್ವಜ್ಞ'*

ಮೇಲಿನ ಎರಡೂ ವಚನಗಳಲ್ಲಿ ನಾಲಗೆಯ ರುಚಿಯ ಬೆನ್ನು ಹತ್ತಿ ತಿಂದರೆ ನಮ್ಮ ಬೆನ್ನು ಯಮ ಹತ್ತುತ್ತಾನೆ ಎಂಬುದು ಖಂಡಿತ. ದೇಹಶ್ರಮವಿಲ್ಲದೆ ತಿಂಡಿ ತಿನ್ನುವುದು, ಟಿ.ವಿ. ನೋಡುತ್ತಾ ತಿನ್ನುವುದು, ಬೇಕರಿ ತಿಂಡಿಗಳಿಗೆ ಮಾರು ಹೋಗುವುದು ಮತ್ತು ಉತ್ತರಭಾರತದ ತಿಂಡಿ ತಿನಿಸುಗಳನ್ನೇ ತಿನ್ನುವ ಭಾರತದ ಯುವಜನಾಂಗಕ್ಕೆ ಸ್ಥೂಲ ಕಾಯದ ತೊಂದರೆ ಈಗಾಗಲೇ ಪ್ರಾರಂಭವಾಗಿದೆ. ರೋಗದ ವಿಷ ವರ್ತುಲದಲ್ಲಿ ಸಿಲುಕಿ ಕೊಳ್ಳುತ್ತಲಿದ್ದಾರೆ. ಈ ಸಂದರ್ಭದಲ್ಲಿ ಸರ್ವಜ್ಞನ ವಚನ–ಎಚ್ಚರಿಕೆಯ ಗಂಟೆಯಾಗಿದೆ.

ಆರೋಗ್ಯಕ್ಕೆ ಹಾನಿಯುಂಟುಮಾಡುವ ಮದ್ಯ ಸೇವನೆ ಬಗೆಗೆ ಮಾದಕ ದ್ರವ್ಯ ವ್ಯಸನಗಳ ಬಗೆಗೆ ಐದುನೂರು ವರ್ಷಗಳ ಹಿಂದೆಯೇ ಎಚ್ಚರಿಸಿದ್ದಾನೆ ಎಂಬುದು ಕೆಳಗಿನ ವಚನಗಳಲ್ಲಿ ಕಾಣಬಹುದು.

*ಮದ್ಯಪಾನವ ಮಾಡಿ ಇದ್ದುದೆಲ್ಲವ ನೀಗಿ*
*ಬಿದ್ದು ಬರುವವನ ಸದ್ದಡಗಿ ಸಂತಾನ*
*ವೆದ್ದು ಹೋದರು ಸರ್ವಜ್ಞ*

*ಅಂಗಿ ಅರಿವೆಯ ಮಾರಿಭಂಗಿಯನು ತಾ ಸೇದಿ*
*ಮಂಗನಂದದಿ ಕುಣಿವಾತಭವಭವದಿ ಭಂಗಗೊಳುತಿಹನು*
*ಸರ್ವಜ್ಞ*

ಇಂತಹ ದುಶ್ಚಟಗಳಿಗೆ ಬಿದ್ದು ದಾರಿತಪ್ಪಿ ಲೈಂಗಿಕ ರೋಗಗಳ ಸುಳಿಗೆ ಸಿಲುಕಿ ಹೆಚ್.ಐ.ವಿ. ಯಂತಹ ರೋಗಕ್ಕೆ ಬಲಿಯಾಗುವುದನ್ನು ನೋಡುತ್ತೇವೆ. ಹದಿಹರೆಯದವರು ಸರ್ವಜ್ಞನ ಹಿತ

ದೇಹದ ಬಗೆಗೆ ವಿವರಿಸುತ್ತದೆ. ವಚನಕಾರರಲ್ಲಿ ವೈದ್ಯ ಸಂಗಣ್ಣ ಎನ್ನುವವರು ಆಗಿಹೋಗಿದ್ದಾರೆ. ಇವರ ಎಲ್ಲಾ ವಚನಗಳು ಲಭ್ಯವಾಗಿಲ್ಲ. ಆರೋಗ್ಯಕ್ಕೆ ಸಂಬಂಧಿಸಿದ ಹಲವಾರು ಅಂಶಗಳು ಆಧ್ಯಾತ್ಮದೊಂದಿಗೆ ಕೂಡಿಕೊಂಡಿರುವುದನ್ನು ಇವರ ವಚನಗಳಲ್ಲಿ ಕಾಣಬಹುದು.

ಶರಣರ ಕಾಲದ ನಂತರ ಬರುವ ಖ್ಯಾತ ವಚನಕಾರ ನೆಂದರೆ ಸರ್ವಜ್ಞ ವಚನಕ್ಕೆ ಇನ್ನೊಂದು ಹೆಸರೇ ಸರ್ವಜ್ಞ. 15-16ನೇ ಶತಮಾನದಲ್ಲಿ ಆಗಿ ಹೋಗಿರುವ ಸರ್ವಜ್ಞ ಸಮಾಜದಲ್ಲಿ ಕಂಡುಬರುವ ಎಲ್ಲಾ ಒಳಿತುಕೆಡಕುಗಳನ್ನು ತನ್ನ ವಚನಗಳಲ್ಲಿ ಚಿತ್ರಿಸಿದ್ದಾನೆ. ಯಾವುದೇ ಮಠಕ್ಕೆ ಸಂಬಂಧ ಪಡದೆ, ಯಾವುದೇ ಪೀಠವನ್ನು ಏರದ ಸರ್ವಜ್ಞ ಇಷ್ಟು ಜನಪ್ರಿಯನಾಗಲು ಕಾರಣ ಅವನು ಜನರಿಗೆ ಹತ್ತಿರ ವಾಗಿರುವ ವಿಷಯಗಳ ಬಗೆಗೆ ವಚನದಲ್ಲಿ ಪ್ರಸ್ತಾಪಿಸಿರುವುದೇ ಎಂದು ಹೇಳಬಹುದು. ಮನುಷ್ಯನಿಗೆ ಬರುವ ರೋಗಗಳಲ್ಲಿ 80% ಆಹಾರ ಮತ್ತು ನೀರಿನ ದೋಷಗಳೇ ಕಾರಣ ಎಂಬುದು ಸಾಬೀತಾಗಿದೆ. ಆಹಾರದ ಬಗೆಗೆ ಅದನ್ನ ಸೇವಿಸುವ ಕ್ರಮದ ಬಗೆಗೆ ಆಹಾರಕ್ಕೆ ಮತ್ತು ಆರೋಗ್ಯಕ್ಕೆ ಇರುವ ಸಂಬಂಧಗಳ ಬಗೆಗೆ ಸರ್ವಜ್ಞ ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ.

ಆಧುನಿಕ ಯುಗದಲ್ಲಿ ಆರೋಗ್ಯದಿಂದ ಇರಬೇಕಾದರೆ ನಮ್ಮ ಜೀವನ ಶೈಲಿಯಲ್ಲಿ ಮಾರ್ಪಾಡು ಮಾಡಿಕೊಳ್ಳುವುದು ಬಹು ಮುಖ್ಯ. ಹುಟ್ಟಲಿರುವ ಮಗುವಿನ ಲಿಂಗ ಬದಲಿಸುವುದಾಗಲಿ, ವೃದ್ಧಾಪ್ಯವನ್ನ ತಡೆಗಟ್ಟುವುದಾಗಲಿ ಅಥವಾ ನಮ್ಮ ನಮ್ಮ ಕುಟುಂಬಗಳ ರೋಗದ ಇತಿಹಾಸ ಬದಲಿಸುವುದು ನಮ್ಮ ಕೈಯಲ್ಲಿ ಇಲ್ಲ. ಆದರೆ ಜೀವನ ಶೈಲಿ ಬದಲಿಸುವುದು ನಮ್ಮ ಕೈಯಲ್ಲಿ ಇಲ್ಲ. ಆದರೆ ಜೀವನ ಶೈಲಿ ಬದಲಿಸುವುದರಿಂದ ರಕ್ತದ ಒತ್ತಡ, ಕೊಲೆಸ್ಟರಾಲ್ ಗಳನ್ನು ಕಡಿಮೆ ಮಾಡಿಕೊಳ್ಳಬಹುದು. ಯೋಗಾಸನ ಪ್ರಾಣಾಯಾಮ, ಶರೀರ ಕ್ರಮ ಮತ್ತು ಸೂಕ್ತ ಆಹಾರಗಳಿಂದ ನಮ್ಮ ಇಡೀ ಜೀವನ ಶೈಲಿ ಬದಲಾಯಿಸಿ ರೋಗಗಳಿಂದ ಮತ್ತು ವೈದ್ಯರುಗಳಿಂದ ದೂರವಿರಬಹುದು. ಈ ನಿಟ್ಟಿನಲ್ಲಿ ಸರ್ವಜ್ಞನ ವಚನಗಳು ದಾರಿದೀಪವಾಗಿವೆ. ಕೆಲವು ವಚನಗಳನ್ನು ಪರಿಶೀಲಿಸೋಣ.

*ಉಂಡು ನೂರಡಿ ಎಣಿಸಿ, ಕೆಂಡಕ್ಕೆ ಕೈಕಾಸಿ*
*ಗಂಡು ಮೇಲಾಗಿ ಮಲಗಿದನು । ವೈದ್ಯ ನಾ*
*ಗಂಡ ಕಾಣಯ್ಯ ಸರ್ವಜ್ಞ*

ಉಂಡ ಮೇಲೂ ಸಹ ನೂರು ಅಡಿ ಇಡುವಷ್ಟು ಚೈತನ್ಯ ನಮ್ಮಲ್ಲಿರಬೇಕು. ಅಂದರೆ ಉಂಡ ಕೂಡಲೇ ಮಲಗಬಾರದು ಎನ್ನುವ ಸೂಚನೆ. ಅದರೊಂದಿಗೆ ಶರೀರಕ್ಕೆ ಶ್ರಮದ ಅವಶ್ಯಕತೆ ಇದೆ ಎನ್ನುವ ಸೂಚನೆ ಈ ವಚನದಲ್ಲಿ ಇದೆ.

*ಹಸಿವಿಲ್ಲದುಣಬೇಡ । ಹಸಿದು ಮತ್ತಿರಬೇಡ*
*ಬಿಸಿಗೂಡಿ ತಂಗಳುಣಬೇಡ । ವೈದ್ಯನಾ*
*ಬಸಸಲೇಬೇಡ ಸರ್ವಜ್ಞ*

ಇಂದಿನ ಅವಸರದ ಯುಗದಲ್ಲಿ ಎಷ್ಟೋ ಸಲ ಹಸಿವಿಲ್ಲದೇ ನಾವು ಉಣ್ಣುತ್ತೇವೆ. ಮಧ್ಯಾಹ್ನದ ಬಿಸಿಯೂಟದ ಜೊತೆ 'ಫ್ರಿಜ್'ದಲ್ಲಿಯ ತಂಪಾದ ಆಹಾರ ಉಪಯೋಗಿಸುತ್ತೇವೆ. ಅಲ್ಲದೇ ಬಿಸಿಬಿಸಿ ಊಟ ಉಂಡ ಮೇಲೆ ಐಸ್‌ಕ್ರೀಂ ತಿನ್ನುವಂತಹ ದುರಾಭ್ಯಾಸ ನಮ್ಮಲ್ಲಿದೆ. ಇದೆಲ್ಲ ಸರಿಯಾದ ಕ್ರಮವಾಗಿಲ್ಲ. ಅಪಚನ, ಆಮ್ಲ ಪಿತ್ತ ಮತ್ತು ಅರುಚಿಗಳಿಗೆ ದಾರಿಯಾಗುತ್ತದೆ.

*'ನಾಲಗೆಯ ಸವಿಸುಖಕ್ಕೆ ಚೀಲವನು ತುಂಬಿದಡೆ*
*ಶೂಲೆಗಳು ಹಲವು ತೆರನಾಗಿ ರುಜೆಗಳಿಂ*
*ಕಾಲನೊಶನಕ್ಕು ಸರ್ವಜ್ಞ'*

*'ನಾಲಗೆಯ ಕಟ್ಟಿಹನು ಕಾಲನಿಗೆ ದೂರನಹ*
*ನಾಲಗೆಯ ರುಚಿಯ ಮೇಲಾಡುತ್ತಿರಲವನ*
*ಕಾಲ ಹತ್ತಿರವು ಸರ್ವಜ್ಞ'*

ಮೇಲಿನ ಎರಡೂ ವಚನಗಳಲ್ಲಿ ನಾಲಗೆಯ ರುಚಿಯ ಬೆನ್ನು ಹತ್ತಿ ತಿಂದರೆ ನಮ್ಮ ಬೆನ್ನು ಯಮ ಹತ್ತುತ್ತಾನೆ ಎಂಬುದು ಖಂಡಿತ. ದೇಹಶ್ರಮವಿಲ್ಲದೆ ತಿಂಡಿ ತಿನ್ನುವುದು, ಟಿ.ವಿ. ನೋಡುತ್ತಾ ತಿನ್ನುವುದು, ಬೇಕರಿ ತಿಂಡಿಗಳಿಗೆ ಮಾರು ಹೋಗುವುದು ಮತ್ತು ಉತ್ತರಭಾರತದ ತಿಂಡಿ ತಿನಿಸುಗಳನ್ನೇ ತಿನ್ನುವ ಭಾರತದ ಯುವಜನಾಂಗಕ್ಕೆ ಸ್ಥೂಲ ಕಾಯದ ತೊಂದರೆ ಈಗಾಗಲೇ ಪ್ರಾರಂಭವಾಗಿದೆ. ರೋಗದ ವಿಷ ವರ್ತುಲದಲ್ಲಿ ಸಿಲುಕಿ ಕೊಳ್ಳುತ್ತಲಿದ್ದಾರೆ. ಈ ಸಂದರ್ಭದಲ್ಲಿ ಸರ್ವಜ್ಞನ ವಚನ ಎಚ್ಚರಿಕೆಯ ಗಂಟೆಯಾಗಿದೆ.

ಆರೋಗ್ಯಕ್ಕೆ ಹಾನಿಯುಂಟುಮಾಡುವ ಮದ್ಯ ಸೇವನೆ ಬಗೆಗೆ ಮಾದಕ ದ್ರವ್ಯ ವ್ಯಸನಗಳ ಬಗೆಗೆ ಐದುನೂರು ವರ್ಷಗಳ ಹಿಂದೆಯೇ ಎಚ್ಚರಿಸಿದ್ದಾನೆ ಎಂಬುದು ಕೆಳಗಿನ ವಚನಗಳಲ್ಲಿ ಕಾಣಬಹುದು.

*ಮದ್ಯಪಾನವ ಮಾಡಿ ಇದ್ದುದೆಲ್ಲವ ನೀಗಿ*
*ಬಿದ್ದು ಬರುವವನ ಸದ್ದಡಗಿ ಸಂತಾನ*
*ವೆದ್ದು ಹೋದರು ಸರ್ವಜ್ಞ*
*ಅಂಗಿ ಅರಿವೆಯ ಮೂರಿಭಂಗಿಯನು ತಾ ಸೇದಿ*
*ಮಂಗನಂದದಿ ಕುಣಿವಾತಭವಭವದಿ ಭಂಗಗೊಳುತಿಹನು*
*ಸರ್ವಜ್ಞ*

ಇಂತಹ ದುಶ್ಚಟಗಳಿಗೆ ಬಿದ್ದು ದಾರಿತಪ್ಪಿ ಲೈಂಗಿಕ ರೋಗಗಳ ಸುಳಿಗೆ ಸಿಲುಕಿ ಹೆಚ್.ಐ.ವಿ. ಯಂತಹ ರೋಗಕ್ಕೆ ಬಲಿಯಾಗು ವುದನ್ನು ನೋಡುತ್ತೇವೆ. ಹದಿಹರೆಯದವರು ಸರ್ವಜ್ಞನ ಹಿತ





ವಚನದಂತೆ ನಡೆದರೆ ಖಂಡಿತವಾಗಿಯೂ ಪ್ರಗತಿಯ ಹಂತಕ್ಕೆ ಹೋಗುತ್ತಾರೆ. ಇಲ್ಲವಾದರೆ ಪ್ರಳಯ ದುರಂತವೇ ಗತಿ.

ದೈಹಿಕ ಆರೋಗ್ಯದಷ್ಟೇ ಮಾನಸಿಕ ಆರೋಗ್ಯ ಮುಖ್ಯ ಮಾನಸಿಕ ಆರೋಗ್ಯಕ್ಕೆ ಮನೋನೈರ್ಮಲ್ಯ ಬಹು ಮುಖ್ಯ. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರ ನಿಯಂತ್ರಣ ಅತಿಮುಖ್ಯವೆಂದು ಸರ್ವಜ್ಞ ಸೂಚಿಸುತ್ತಾನೆ. ಆದ್ದರಿಂದ ಸರ್ವಜ್ಞ ಹೇಳುತ್ತಾನೆ.

'ಕಣ್ಣುನಾಲಗೆ ಮನವು ತನ್ನದೆಂದೆನ ಬೇಡ
ಅನ್ಯರು ಕೊಂದರೆನಬೇಡ ಇವು ಮೂರು
ತನ್ನ ಕೊಲ್ಲುವುವು ಸರ್ವಜ್ಞ'

'ಕಚ್ಚೆನಾಲಗೆ ಮನವು ಇಚ್ಚೆಯಲಿ ಇದ್ದಿಹರೆ
ನುಚ್ಚುಮುಜ್ಜಿಗೆಯು ಹಿತವಕ್ಕು ಆಯುಷ್ಯ
ಹೆಚ್ಚಾಗಲಿಕ್ಕು ಸರ್ವಜ್ಞ'

ಮಾನಸಿಕ ಆರೋಗ್ಯಕ್ಕೂ ದೈಹಿಕ ಆರೋಗ್ಯಕ್ಕೂ ನೇರವಾದ ಸಂಬಂಧವಿದೆ ಎನ್ನುವ ಆಧುನಿಕ ವೈದ್ಯಕೀಯ ವಿಚಾರವನ್ನು ಸರ್ವಜ್ಞನ ವಚನಗಳಲ್ಲಿ ಖಂಡಿತವಾಗಿಯೂ ಕಾಣಬಹುದು.

ಪ್ರಾಸಂಗಿಕವಾಗಿ ಇಷ್ಟು ಚೆನ್ನಾಗಿ ವೈದ್ಯಕೀಯದ ಆರೋಗ್ಯದ ವಿಚಾರಗಳು ವಚನಗಳಲ್ಲಿ ಮೂಡಿ ಬಂದಿವೆ. ಈ ಲೇಖನ ವಚನಗಳಲ್ಲಿ ಆರೋಗ್ಯ ಪ್ರಜ್ಞೆ ಕುರಿತು ಒಂದು ಚಿಕ್ಕ ಪಕ್ಷಿನೋಟ. ಈ ವಿಷಯದಲ್ಲಿ ಸಂಶೋಧನೆಗೆ ಅವಕಾಶವಿದೆ. ಮುಂಬರುವ ದಿನಗಳಲ್ಲಿ ಈ ವಿಷಯದಲ್ಲಿ ಹೆಚ್ಚಿನ ಸಂಶೋಧನೆ ನಡೆದು, ಹೊಸ ಹೊಸ ಅಂಶಗಳು ಬೆಳಕಿಗೆ ಬಂದರೆ ಕರ್ನಾಟಕದ ಆರೋಗ್ಯ ಸಾಹಿತ್ಯ ಬೆಳವಣಿಗೆಗೆ ದಾರಿಯಾಗುವುದಲ್ಲದೆ, ಇಡೀ ಸಮಾಜದ ಆರೋಗ್ಯ ಪ್ರಜ್ಞೆಯ ಬೆಳವಣಿಗೆ ಖಂಡಿತವಾಗಿಯೂ ಸಹಾಯ ವಾಗುತ್ತದೆ. *

## ಕಂಬನಿ

ಲಿಂ. ಡಾ|| ಕೆ.ಎಸ್. ಜಗದೀಶ್

## ಒಂದು ನೆನಪು

ದೇಶವಿದೇಶಗಳಲ್ಲಿ ಪ್ಲಾಸ್ಟಿಕ್ ತಂತ್ರಜ್ಞಾನ ಕುರಿತು ಪ್ರಬಂಧ ಮಂಡಿಸಿ ವಿಶ್ವದ ಗಮನ ಸೆಳೆದಿದ್ದ ವಿಜ್ಞಾನಿ ಡಾ|| ಕೆ.ಎಸ್. ಜಗದೀಶ್ ದಿನಾಂಕ 15-07-2006ರಂದು ಲಿಂಗೈಕ್ಯರಾದರು. ಇವರು ಶ್ರೀ ಸಿದ್ಧಗಂಗಾ ಮಠದ ನಿವೃತ್ತ ಸಂಸ್ಕೃತ ವಿದ್ವಾಂಸರಾದ ವಿದ್ವಾನ್ ಶ್ರೀ ಕೆ.ಎಸ್. ಶಿವನಂಜಯ್ಯ ನವರ ಮತ್ತು ಲಿಂ. ಶ್ರೀಮತಿ ಸರ್ವಮಂಗಳಮ್ಮ ಇವರ ಹಿರಿಯ ಮಗ. 10-02-1956 ರಲ್ಲಿ ಜನಿಸಿದ ಇವರು ಶ್ರೀಮಠದ ವಿದ್ಯಾಸಂಸ್ಥೆಯಲ್ಲಿ ಪ್ರಾಥಮಿಕ ಶಿಕ್ಷಣದಿಂದ ಪದವಿ ಶಿಕ್ಷಣದವರೆಗೂ ವಿದ್ಯಾಭ್ಯಾಸ ಮಾಡಿದರು. ನಂತರ ಕರ್ನಾಟಕ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಮತ್ತು ಮೈಸೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದರು. ಸ್ನೇಹಜೀವಿಯಾಗಿ, ಪ್ರಸನ್ನ ಚಿತ್ತರಾಗಿ, ಸರಳ ಸಜ್ಜನಿಕೆಗೆ ಸಾಕಾರವಾಗಿ ಎಲ್ಲರೊಳಗೊಂದಾಗಿ ಬಾಳಿದರು. ಇವರ ಶಿಸ್ತುಬದ್ಧ ಜೀವನ ಹಾಗೂ ಚಿಕ್ಕ ವಯಸ್ಸಿನಲ್ಲಿಯೇ ಮಾಡಿದ ಸಾಧನೆಗಳು ಪ್ರತಿಯೊಬ್ಬ ಯುವಕರಿಗೂ ಮಾದರಿಯಾಗಿವೆ. ಇವರು ಕೇಂದ್ರ ಸರ್ಕಾರದ ಪ್ಲಾಸ್ಟಿಕ್ ಇಂಜಿನಿಯರಿಂಗ್ ಮತ್ತು ತಂತ್ರಜ್ಞಾನ ಕೇಂದ್ರೀಯ ಸಂಸ್ಥೆಯ ದಕ್ಷಿಣ ಭಾರತದ ಪ್ರಾಂತೀಯ ವಿಭಾಗದ ಉಪ-ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದರು. ಇವರ ದಕ್ಷ ಹಾಗೂ ಪ್ರಾಮಾಣಿಕ ಸೇವೆ ಗುರುತಿಸಿದ ಕರ್ನಾಟಕ ಸರ್ಕಾರ 1996ರಲ್ಲಿ 'ಸರ್. ಸಿ.ವಿ. ರಾಮನ್ ಪ್ರಶಸ್ತಿ ಮತ್ತು ಯುವ ವಿಜ್ಞಾನಿ ಪ್ರಶಸ್ತಿ ನೀಡಿ ಗೌರವಿಸಿತ್ತು. ಪ್ಲಾಸ್ಟಿಕ್ ತಂತ್ರಜ್ಞಾನ ಕ್ಷೇತ್ರ ಇಂದು ಒಬ್ಬ ಶ್ರೇಷ್ಠ ತಂತ್ರಜ್ಞಾನನನ್ನು ಕಳೆದುಕೊಂಡಂತೆ ಆಗಿದೆ. ಪ್ರತಿಷ್ಠಿತ ವಿದೇಶಿ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಲು ಬಂದ ಆಹ್ವಾನಗಳನ್ನು ತಿರಸ್ಕರಿಸಿ ತಾಯ್ನಾಡಿನ ಸಂಸ್ಥೆಗಳಲ್ಲೇ ಸೇವೆ ಸಲ್ಲಿಸಲು ನಿರ್ಧರಿಸಿದರು. ವಿದೇಶದ ಸಂಸ್ಥೆಗಳಿಗೆ ಸಂದರ್ಶಕ ಪ್ರಾಧ್ಯಾಪಕ ರಾಗಿ ಮಾತ್ರ ಅವರು ಹೋಗುತ್ತಿದ್ದರು. ಅಪ್ಪಟ ಶಿಸ್ತು ಮತ್ತು ಪ್ರತಿಭೆ ಜಗದೀಶ್ ಅವರಲ್ಲಿ ಅಡಕವಾಗಿತ್ತು.

ಜಗದೀಶ್ ಇವರು ನೊಯಿಡಾದಲ್ಲಿರುವ ಜೆ.ಎಸ್.ಎಸ್.ಎ.ಟಿ.ಇ ಪ್ರಾಂಶುಪಾಲರಾಗಿ, ಉತ್ತರಾಂಚಲದ ರೂರ್ಕಿಯ ತಾಂತ್ರಿಕ ಕಾಲೇಜಿನ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದರು.

ಜಗದೀಶ್ ಇವರು ಪರಮಪೂಜ್ಯರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದು ಶ್ರೀಮಠದ ಸೇವಾಕಾರ್ಯಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಜಗದೀಶ್ ಅವರ ಬಾಳಿನುದ್ದಕ್ಕೂ ಸಹಕರಿಸುತ್ತ ಹೆಜ್ಜೆ ಹಾಕಿದ ಧರ್ಮಪತ್ನಿ ಶ್ರೀಮತಿ ಮಂಜುಳಾ ಜಗದೀಶ್ ಮತ್ತು ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲೆಂದು ಆಶಿಸುತ್ತಾ ಲಿಂಗೈಕ್ಯರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

# ಶರಣರ ಜೀವನ ಮತ್ತು ಮಾನವ ಹಕ್ಕುಗಳು

– ಸ.ರಾ. ಸುಳಕೂಡೆ,
ನಂ. ೧೯೧೬, 'ಶಿವಪ್ರಸಾದ, ರಾಮತೀರ್ಥ ನಗರ, ಬೆಳಗಾವಿ –೫೯೦ ೦೦೧೫.

೧೨ನೇ ಶತಮಾನದಲ್ಲಿ ಬಸವಾದಿ ಶರಣರು ಮಾನವ ಬದುಕಿನ ಉತ್ಕರ್ಷಕ್ಕೆ ಪಣತೊಟ್ಟು ಹೋರಾಡಿದ್ದು ಗಮನಾರ್ಹ ಸಂಗತಿ. ಅವರು ಕಟ್ಟಬಯಸಿದ ಸಮಾಜ ಮಾನವ ಸಮಾನತೆಯ ದ್ಯೋತಕವಾಗಿತ್ತು. ಬಸವಾದಿ ಶರಣರು ಮನುಷ್ಯ ಬದುಕಿಗೆ ವಿಶಾಲತೆಯ ಮನೋಭೂಮಿಕೆಯನ್ನು ತಂದು ಕೊಟ್ಟವರಲ್ಲಿಯೇ ಪ್ರಥಮರಾಗಿದ್ದಾರೆ. ಶರಣರ ಜೀವನ ಸಿದ್ಧಾಂತವು ಮೇಲು–ಕೀಳು, ಗಂಡು–ಹೆಣ್ಣು, ಅನೀತಿ, ಅನ್ಯಾಯ, ಮೋಸ–ವಂಚನೆ, ದ್ವೇಷ–ಅಸೂಯೆ ಮುಂತಾದ ವಿಮುಖ ಸಂಗತಿಗಳನ್ನು ನಿರಾಕರಿಸುವುದಾಗಿದೆ. ಜಾತಿ ಗೊಂದಲವನ್ನು ದೂರ ಸರಿಸಿದ ಶರಣರು ಸಕಲರನ್ನು ತಮ್ಮ ಸುತ್ತಮುತ್ತ ಕೂಡಿಸಿಕೊಂಡು ಸಾತ್ವಿಕ ಮತ್ತು ಶುದ್ಧ–ಪರಿಶುದ್ಧ ಜೀವನ ಸಾಗಿಸಲು ಪ್ರೇರಣೆ ನೀಡಿದರು. ಸಂಪರ್ಕ ಸಾಧನಗಳ ಕೊರತೆವಿದ್ದ ಅಂದಿನ ದಿನಮಾನಗಳಲ್ಲೂ ಶರಣರ ಬದುಕಿನ ತಿರುಳು ಪ್ರಸಾರಗೊಂಡು ಹೊರನಾಡಿನ ಪ್ರಜ್ಞಾವಂತರು ಕಲ್ಯಾಣಕ್ಕೆ ಬಂದು ಜೀವನ ಸಾರ್ಥಕ ಮಾಡಿಕೊಂಡಿದ್ದು ವಿಶೇಷವೇ ಆಗಿದೆ. ಬಸವಾದಿ ಶರಣರು ಮಾನವೀಯ ಮೌಲ್ಯಗಳ ಸೂತ್ರಧಾರನಾಗಿ ಇಂದಿನ ಸಮಾಜಕ್ಕೂ ಮಾರ್ಗದರ್ಶನ ನೀಡುವಂತವರಾಗಿದ್ದಾರೆ.

ಭಾರತೀಯ ಸಮಾಜದೊಳಗೆ ಬೆಳೆದು ನಿಂತಿದ್ದ ಮೇಳು–ಕೀಳಿನ ಭಾವ, ಜಾತಿ–ವಿಜಾತಿ, ಸ್ಪೃಶ್ಯ–ಅಸ್ಪೃಶ್ಯ, ಯಾವುದೇ ಸ್ವಾತಂತ್ರ್ಯವಿಲ್ಲದ ಶೂದ್ರ, ಸ್ವರ್ಗ ಪ್ರಾಪ್ತಿಗಾಗಿ ಯಜ್ಞ–ಯಾಗಾದಿಗಳು, ಕುಲಜ– ಕುಲಹೀನ... ಮುಂತಾದ ಜೀವನ ವಿರೋಧಿ ಸಂಗತಿಗಳನ್ನು ಬೇರು ಸಹಿತ ಕಿತ್ತ ಶರಣರು; ಪ್ರತಿಯೊಬ್ಬರು ಸಮಾನವಾಗಿ ಬಾಳಲು ಅರ್ಹರು. ಸ್ವರ್ಗ ಪಡೆಯಲು ಶಕ್ತರೆಂದು ಸಾರಿದರು. ವ್ಯಕ್ತಿ–ವ್ಯಕ್ತಿಯ ನಡುವೆ ಎದ್ದಿದ್ದ ಸಂಶಯ, ರಾಗ–ದ್ವೇಷ, ಅಪನಂಬಿಕೆ, ಶ್ರೇಷ್ಠರೆ–ಹೀನತೆ ಎಲ್ಲ ಕರ್ಮಠಗಳನ್ನು ಕರಗಿಸಿದ ಶರಣರು ಇಹದ ಬಾಳಿಗೆ ನಿಷ್ಠರಾಗಲು ಸಕಲರನ್ನು ಹುರಿದುಂಬಿಸಿದರು. ಶರಣರ ಜೀವನವು ತೆರೆದ ಪುಸ್ತಕವಾಗಿದೆ. ಅಲ್ಲಿ ಭಾಷಾ ಗೊಂದಲವಿಲ್ಲ. ಜಾತಿ ಸೂತಕವಿಲ್ಲ, ನಿನಗೇನು ತಿಳಿಯುವುದಿಲ್ಲೆಂಬ ದರ್ಪವಿಲ್ಲ, ಮುಟ್ಟಬೇಡವೆಂಬ ಕಳಂಕ ಭಾವ–ಭಾವನೆಗಳಿಲ್ಲ, ಸ್ವರ್ಗ–ನರಕಗಳ ಭಯಭೀತಿಯಿಲ್ಲ. ಬಲಿ ಸಂಸ್ಕೃತಿಯಾಗಲಿ ಇನ್ನೊಬ್ಬರದನ್ನು ದೋಚುವ ಹುನ್ನಾರವಿಲ್ಲ. ಹೆಣ್ಣು–ಹೊನ್ನು–ಮಣ್ಣಿಗಾಗಿ ಹೊಡೆದಾಟವಿಲ್ಲ. ಶರಣರ ಜೀವನವು ಹೂವಿನಂತೆ ಸುವಾಸಿತ, ಹಣ್ಣಿನಂತೆ ರಸಭರಿತ ಆಕಾಶದಷ್ಟು ವಿಶಾಲವೆಂದು ಹೇಳಬಹುದಾಗಿದೆ. ಶರಣರ ಜೀವನವು ಪ್ರಜಾಸತ್ತಾತ್ಮಕವು ಮತ್ತು ಪ್ರಗತಿಪರ ಧೋರಣೆಯನ್ನು ಹೊಂದಿದೆ. ಜಗತ್ತಿನ ಮಾನವೀಯ ಮೌಲ್ಯಗಳು ಶೈವಾವಸ್ಥೆಯಲ್ಲಿರುವಾಗ ಶರಣರು ತಮ್ಮ ನಡೆ–ನುಡಿಗಳನ್ನು ಒಂದಾಗಿರಿಸಿ ಸಕಲ ಜೀವಾತ್ಮರಿಗೆ ಲೇಸನ್ನು ತಂದುಕೊಟ್ಟದ್ದು ಎಂದೆಂದಿಗೂ ಅಚ್ಚಳಿಯದ ಜಾಗತಿಕ ಮೌಲ್ಯವೇ ಆಗಿದೆ.

ಶರಣರು ಕಟ್ಟಿದ ಸಮಾಜದಲ್ಲಿ 'ಬೇಡುವವರಿರಲಿಲ್ಲ' ಎಂಬ ಸಂಗತಿ ಮಾನವ ಮೌಲ್ಯ ಮತ್ತು ಹಕ್ಕುಗಳು ಸಾಧಿಸಬೇಕಾದ ಅಂತಿಮ ಗುರಿಯ ದಿಕ್ಸೂಚಿಯೇ ಅಗಿದೆ. ಜಗತ್ತಿನಾ ಭ್ರಾತೃತ್ವಕ್ಕೆ ಬಸವಣ್ಣನವರ ಸೂತ್ರ ಇಂತಿದೆ.

'ಇವನಾರವ, ಇವನಾರವ, ಇವನಾರವ? ನೆಂದೆನಿಸದಿರಯ್ಯಾ
'ಇವನಮ್ಮವ, ಇವನಮ್ಮವ, ಇವನಮ್ಮವ' ನೆಂದೆನಿಸಯ್ಯಾ
ಕೂಡಲಸಂಗಮದೇವಾ ನಿಮ್ಮ ಮನೆಯ ಮಗನೆನಿಸಯ್ಯಾ.

ಮನುಕುಲದ ವಿಶಾಲತೆಯ ಪರಿಧಿಯನ್ನು ವಿಸ್ತರಿಸಿದ ಶರಣರು ಪ್ರತಿಯೊಬ್ಬರನ್ನು ತಮ್ಮ ಮನೆಯ ಮಕ್ಕಳಂತೆ ನೋಡಿಕೊಂಡರು. ಇದೇ ಮಾನವ ಹಕ್ಕುಗಳ ಸೂತ್ರವೂ ಆಗಿದೆ.

ಬಸವಾದಿ ಶರಣರ ಜೀವನದ ಸೂತ್ರಗಳನ್ನು ಅವಲೋಕಿಸುವುದೆಂದರೆ ನಮ್ಮನ್ನು ನಾವು ಚನ್ನಾಗಿ ಅರಿತುಕೊಂಡು ಇನ್ನೊಬ್ಬರನ್ನು ಸರಿಯಾಗಿ ಅರ್ಥೈಸಿಕೊಂಡು ಸಮರ್ಥವಾಗಿ ಬದುಕುವುದಾಗಿದೆ. ಶರಣರ ಜೀವನಾದರ್ಶಗಳನ್ನು ಸ್ಥೂಲವಾಗಿ ಹೀಗೆ ಪಟ್ಟಿ ಮಾಡಬಹುದಾಗಿದೆ.

**ಅರಿವೇ ಗುರು :** ಪ್ರತಿಯೊಬ್ಬ ಮನುಷ್ಯ ಅಂದರೆ ಗಂಡು–ಹೆಣ್ಣು ಪ್ರಜ್ಞಾವಂತರಾಗಿ ಬಾಳುವುದೇ ಆಗಿದೆ. ಅರಿವಿಲ್ಲದೆ ಬಾಳುವುದೆಂದರೆ ಗುರುವಿಲ್ಲದೆ ಜೀವನ ಸಾಗಿಸಿದಂತಾಗುತ್ತದೆ. ಪ್ರತಿಯೊಬ್ಬರು ತಮ್ಮನ್ನು ತಾವು ಅರಿವುದರೊಂದಿಗೆ ಇನ್ನೊಬ್ಬರನ್ನು ಸರಿಯಾಗಿ ಅರಿತುಕೊಂಡು ಬಾಳುವುದೇ ಮಾನವ ಹಕ್ಕಿನ ತಿರುಳಾಗಿದೆ. ತನ್ನನ್ನು ತಾನು ಅರಿತುಕೊಂಡರೆ ಜಗತ್ತಿನಲ್ಲಿಯ ಜಗಳಗಳು ಮಾಯವಾಗುವಲ್ಲಿ ಎರಡು ಮಾತಿಲ್ಲ. ಮನುಷ್ಯನ ಬಾಳು ಅರಿವಿನಿಂದ ತುಂಬಿಕೊಂಡರೆ ಬಾಳಿನಲ್ಲಿ ಮಧುರ ಭಾವವು ಹೊರಹೊಮ್ಮದಿರಲಾರದು. ಮಧುರ ಭಾವವು ಸುವ್ಯವಸ್ಥಿತ ಸಮಾಜ ನಿರ್ಮಾಣಕ್ಕೆ ಭದ್ರ–ಬುನಾದಿ ಹಾಕುತ್ತದೆ. ಇದೇ ಮಾನವ ಹಕ್ಕು ಸಾಧಿಸುವ ಗುರಿಯೂ ಆಗಿದೆ. ಶರಣರು ತಮ್ಮ ಬದುಕನ್ನು ಸ್ವವಿಮರ್ಶಿಸಿಕೊಂಡು





ತಪ್ಪನ್ನು ಅಳಿಸಿಕೊಂಡು ಒಪ್ಪಾಗಿ ಬದುಕಿ ತೋರಿಸಿದ್ದಾರೆ. ತಪ್ಪು–ಒಪ್ಪು ಅರ್ಥೈಸಿಕೊಂಡಾಗಲೇ ಜಗದ ಬಾಳು ಸರಾಗವಾಗುತ್ತೆಂಬುದು ಶರಣರ ಜೀವನ ಮತ್ತು ಮಾನವ ಹಕ್ಕುಗಳ ಅಭಿಮತವಾಗಿದೆ.

ಶೀಲಯುಕ್ತ ಜೀವನವೇ ಸರ್ವಶ್ರೇಷ್ಠ. ಆದಿಮಾನವನಲ್ಲಿ ಮನುಷ್ಯಾತ್ವ ಕಿಂಚಿತ್ತವಿತ್ತು ;ಪಶುತ್ವಕ್ಕಿಂತಲೂ ಮಿಗಿಲಾದ ಜೀವನವಿರಲಿಲ್ಲ. ಇಂಥ ಸ್ಥಿತಿಯನ್ನು ಪಲ್ಲಟಗೊಳಿಸಿದ ಶರಣರು ಶೀಲಯುಕ್ತ ಜೀವನವನ್ನು ನಡೆದು ತೋರಿಸಿದರು. ಮಾನವನು ಈ ಭುವನದಲ್ಲಿಯೇ ಸಕಲ ಭಾಗ್ಯ ಪಡೆದುಕೊಳ್ಳಬೇಕಾಗುವುದರಿಂದ ಇಹದ ಜೀವನವನ್ನು ಅತ್ಯಂತ ಸತ್ಯ, ನಿಷ್ಠೆ, ನಿಷ್ಠುರತೆಯಿಂದ ರೂಪಿಸಿಕೊಳ್ಳಬೇಕೆಂದು ಶರಣರು ಸ್ಪಷ್ಟವಾಗಿಯೇ ಹೇಳಿದ್ದಾರೆ. ಭುವನದ ಜೀವನ ಸತ್ಯ–ಸುಂದರ–ಶಿವಮಯವಾಗಬೇಕಾದರೆ ಅನುಸರಿಸಬೇಕಾದ ಮಾನವೀಯ ಮೌಲ್ಯಗಳನ್ನು ಸಾದರಪಡಿಸುವ ಶರಣರು ಶೀಲ ಸಂವರ್ಧನೆಗೆ ಸಪ್ತ ಸೂತ್ರಗಳನ್ನು ನೀಡಿದ್ದಾರೆ.

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,*
*ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,*
*ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ!*

ಬಸವಣ್ಣನವರು ಈ ವಚನದಲ್ಲಿ ಮಾನವ ಹಕ್ಕುಗಳನ್ನು ಆಚರಣೆಗೆ ತರುವ ಪರಿಯನ್ನೇ ಹೇಳಿದ್ದಾರೆ. ಶೀಲಮುಕ್ತ ಜೀವನ ಸಾಗಿಸುವುದೇ ಮಾನವ ಹಕ್ಕುಗಳ ಪರಿಪಾಲನೆಯಾಗಿದೆ.

**ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸಮಾನತೆ :** ಬಸವಣ್ಣನವರು ಮಹಿಳೆಯರಿಗೆ ಪುರುಷ ಸಮಾನವಾದ ಸ್ಥಾನಮಾನ ಗೌರವ ನೀಡುವುದರ ಜೊತೆಗೆ ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸರ್ವ ಸ್ವತಂತ್ರ್ಯ ನೀಡಿದರು. ಹೆಣ್ಣು ಪ್ರಗತಿಗೆ ಮಾರಕವೆಂಬುದನ್ನು ಸಕಲ ಅನಿಷ್ಟಗಳಿಗೆ ಕಾರಣವೆಂಬುದನ್ನು ಅತ್ಯಂತ ವಸ್ತುನಿಷ್ಟವಾಗಿ ಅಲ್ಲಗೆಳೆದದ್ದು ಇಂದಿಗೂ ಮಾರ್ಮಿಕವಾಗಿದೆ. ಹೆಣ್ಣು ಆಧ್ಯಾತ್ಮಿಕ ತುತ್ತ ತುದಿಗೂ ಹಕ್ಕುದಾರರೆಂದು ಸಾರಿದ್ದು ಜೀವನ ಬೆಳಕಿನ ಭಾಗವೇ ಆಗಿದೆ.

ಗಂಡು–ಹೆಣ್ಣು ಸುಮಧುರವಾಗಿ ಬಾಳುವ ಮೂಲಕ ಜಗತ್ತಿನ ಆಶೊತ್ತರಗಳನ್ನು ಪೂರೈಸಿಕೊಳ್ಳಲು ಸಾಧ್ಯವೆಂದು ಸಾರಿದ ಶರಣರು ಹೆಣ್ಣು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ಎಂದಿದ್ದಾರೆ. ಎಲ್ಲ ಮಾನವರು ಸ್ವತಂತ್ರರು, ಸಮಾನರು, ಎಲ್ಲರಿಗೂ ಅವರ ಘನತೆ, ಗೌರವ ಮತ್ತು ಎಲ್ಲರೂ ಪರಸ್ಪರ ಸಹೋದರ ಭಾವದಿಂದ ಜೀವಿಸಲು ಅವಕಾಶ ಹೊಂದಿದ್ದಾರೆಂಬ ಮಾನವಹಕ್ಕಿಗಿಂತಲೂ ಹೆಚ್ಚಿನ ಸ್ಥಾನಮಾನ ಮಹಿಳೆಗೆ ಕೊಟ್ಟಿದ್ದಾರೆ. ಶರಣರು ಸರ್ವರನ್ನೂ ಸಮಾನವಾಗಿ ಗುರುತಿಸಿದ್ದಾರೆ. ಅವರು ಯಾರನ್ನೂ ಗುಲಾಮರಾಗಿ ಇರದಂತೆ ನೋಡಿಕೊಂಡಿದ್ದಾರೆ. ಪ್ರತಿಯೊಬ್ಬರು ನಿರ್ಭಯವಾಗಿ ಜೀವಿಸುವ ಮತ್ತು ವೈಯಕ್ತಿಕ ಬದುಕನ್ನು ರಕ್ಷಿಸಿಕೊಳ್ಳುವ ಹಕ್ಕು; ಯಾರು ಇನ್ನೊಬ್ಬರ ಗುಲಾಮರಲ್ಲ. ಯಾರೂ ಇನ್ನೊಬ್ಬರನ್ನು ಆಧೀನದಲ್ಲಿಟ್ಟುಕೊಳ್ಳಬಾರದು, ಯಾರು ಇನ್ನೊಬ್ಬರಿಗೆ ಮಾನಸಿಕವಾಗಿ ಅಥವಾ ದೈಹಿಕವಾಗಿ ಹಿಂಸಿಸಬಾರದು. ಕಠೋರತೆ ಪ್ರದರ್ಶಿಸಬಾರದು. ಪುರುಷ ಮತ್ತು ಮಹಿಳಾವರ್ಗ, ವರ್ಗ–ಜಾತಿ ಭೇದವಿಲ್ಲದೆ ಒಬ್ಬರನೊಬ್ಬರು ಮೆಚ್ಚಿ ಬಸವಾದಿ ಶರಣರು ಆಚರಣೆಗೆ ತಂದಿದ್ದರೆಂಬ ಸಂಗತಿಗೆ ವಿಶೇಷ ಅಧ್ಯಯನದ ಅಗತ್ಯವಿಲ್ಲ.

**ಜೀವನ ಸಾಧನೆಗೆ ಕಾಯಕ, ದಾಸೋಹ, ಅನುಭಾವ ಅಗತ್ಯ:** ಶರಣರು ಜೀವನ ಸರಾಗವಾಗಿ ಸಾಗಿ ದಡ ಸೇರಲು ಕಾಯಕ ಮುಖ್ಯವೆಂದು ಹೇಳಿದ್ದಾರೆ. ಕಾಯಕವೇ ಕೈಲಾಸವೆಂದು ಹೇಳಿದ್ದಾರೆ. ಕಾಯಕವೇ ಕೈಲಾಸವೆಂದ ಬಸವಣ್ಣನವರು ದುಡಿದು ತಿನ್ನುವ ಕಾಯಕದ ಆದರ್ಶವನ್ನು ತಮ್ಮ ಮುಂದಿಟ್ಟಿದ್ದಾರೆ. ಸತ್ಯ ಶುದ್ಧ ಕಾಯಕದಿಂದ ಗಳಿಸಿದವರಲ್ಲಿ ದಾಸೋಹ ಮಾಡುವುದು ಅಗತ್ಯವೆಂದು ಶರಣ ಸಿದ್ಧಾಂತ ಹೇಳುತ್ತದೆ. ಬಸವಣ್ಣನವರು ನಿತ್ಯ ದಾಸೋಹಕ್ಕಾಗಿ ಮಹಾಮನೆಯನ್ನು ಸ್ಥಾಪಿಸಿದರು. ಇದು ಸಾಮೂಹಿಕವಾಗಿ ಯಾವುದೇ ಭೇದಭಾವವಿಲ್ಲದೆ ಕೂಡಿ ಊಟ ಮಾಡುವ ಪರಿಸರವನ್ನು ನಿರ್ಮಿಸುವ ಮೂಲಕ ಸಮಾನತೆ ತರುವ ಸೂತ್ರವೇ ಆಗಿದೆ.

ಬಸವಣ್ಣನವರು ಅಭಿಪ್ರಾಯ ವ್ಯಕ್ತಗೊಳಿಸಲು ಮತ್ತು ಮುಕ್ತ ಸಂವಾದಕ್ಕಾಗಿ ಅನುಭವ ಮಂಟಪವನ್ನು ಸ್ಥಾಪಿಸಿದ್ದರು. ಇದು ಇಂದಿನ ಲೋಕಸಭೆಯನ್ನು ನೆನಪಿಸುತ್ತದೆ. ಇದಲ್ಲದೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪ್ರತಿಧ್ವನಿಸುತ್ತದೆ.

ಸಕಲರಿಗೂ ಉದ್ಯೋಗ, ಗಳಿಸಿದ್ದನ್ನು ಬಳಸುವಾ ಸ್ವಾತಂತ್ರ್ಯ ಮತ್ತು ಅಭಿಮತವನ್ನು ವ್ಯಕ್ತಗೊಳಿಸಲು ಮುಕ್ತ ಅವಕಾಶ ಇವೆಲ್ಲವು ಮಾನವ ಹಕ್ಕುಗಳ ಪ್ರತಿರೂಪಗಳೇ ಆಗಿವೆ. ಇದೆಲ್ಲ ಶರಣರ ಜೀವನಾದರ್ಶವೂ ಆಗಿತ್ತು.

ಪ್ರತಿಯೊಬ್ಬರಿಗೂ ವಿಚಾರ ಮಾಡುವ, ನಂಬುವ, ತರ್ಕಿಸುವ, ತಮ್ಮ ಅಭಿಪ್ರಾಯವನ್ನು ಮಾತು ಅಥವಾ ಬರಹದ ಮೂಲಕ ವ್ಯಕ್ತಪಡಿಸುವ ಮಾನವ ಹಕ್ಕು ಇಂದಿನದಾದರೆ ಈ ಹಕ್ಕನ್ನು ಶರಣರು ನಿತ್ಯ ಅನುಭವಿಸಿ ಅನುಭಾವದ ವಚನಗಳನ್ನು ನೀಡಿದ್ದು; ಸಾಹಿತ್ಯ ರಚನೆ

ಯಲ್ಲೂ ಹೆಸರು ಗಳಿಸಿದ್ದು ಎದ್ದು ಕಾಣದಿರಲಾರದು.

ಶರಣರು ನಡೆ-ನುಡಿಯಲ್ಲಿ ನಿಷ್ಠೆ ಇಟ್ಟುಕೊಂಡು ಬಾಳುವ ಮೂಲಕ ಸರ್ವಶ್ರೇಷ್ಠ ಮಾನವ ಬದುಕಿನ ಮಾದರಿ ಒದಗಿಸಿದ್ದಾರೆ. ಅವರ ಜೀವನ ನೇರ ನಡೆನುಡಿಗಳ ಸಂಗಮ ವಾಗಿದೆ; ಮಾನವ ಹಕ್ಕುಗಳನ್ನು ಆಚರಣೆಗೆ ತರುವ ಚೇತನ ಶಕ್ತಿಯಾಗಿದೆ. ಸರ್ವಶೋಷಣೆ, ಭಯಭೀತಿ ರಹಿತ ಬದುಕಿಗೆ ಭದ್ರಬುನಾದಿ ಹಾಕಿರುವ ಶರಣರು ಸ್ವತಂತ್ರ ಧೀರರಾಗಿ ಬಾಳಿದ್ದಾರೆ. ಅವರ ಜೀವನದ ಸಾರದಲ್ಲಿ 'ಜೀವನ ಮುಕ್ತಿ ಮತ್ತು ಶಕ್ತಿ ಅಡಕವಾಗಿದೆ. ಶರಣರ ಜೀವನದಂತೆ ನಮ್ಮ ಜೀವನವಾದರೆ ಮಾನವ ಹಕ್ಕುಗಳ ಪರಿಪಾಲನೆಯು ಸಹಜ ಗೊಳ್ಳದಿರಲಾರದು. ಸಮಾಜದ ಕಟ್ಟ ಕಡೆಯವನಿಗೂ ಬದುಕಿನ ಅವಕಾಶ ಕಲ್ಪಿಸಿರುವ ಶರಣರು ಮಾನವ ಹಕ್ಕುಗಳ ವಾರಸುದಾರರಾಗಿ ನಮ್ಮ ಮುಂದೆ ಇದ್ದಾರೆ. ಇಂಥ ಶರಣರ ಜೀವನದಿ ಪ್ಲುನುಕುಲದ ಸರ್ವಶ್ರೇಷ್ಠ ಗುಣಗಳು ಅಡಕ ವಾಗಿರುವುದರಿಂದ ಅವರ ಜೀವನ ದಾರಿಯಲ್ಲಿ ಸಾಗುವು ದೆಂದರೆ ಮಾನವ ಹಕ್ಕುಗಳನ್ನು ಆಚರಣೆಗೆ ತರುವುದೆಂಬ ಅರ್ಥವೇ ಅಲ್ಲವೇ?

## ವಿಜ್ಞಾನಿಗಳ ದೃಷ್ಟಿಯಲ್ಲಿ ಬ್ರಹ್ಮಾಂಡ

### ಬ್ರಹ್ಮಾಂಡದಲ್ಲಿರುವ ಭುವನಂಗಳು

– ಪೂಜ್ಯ ಚೆನ್ನಬಸವಾನಂದ ಸ್ವಾಮೀಜಿ, ಬಸವಧಾಮ,
ಅತ್ತಿವೇರಿ, ಹುನಗುಂದ ಪೊ. ಮುಂಡಗೋಡ ತಾ., ಉ.ಕ. ಜಿ.

ವಿಜ್ಞಾನಿಗಳ ಪ್ರಕಾರ ಆಕಾಶಗಂಗೆಯಲ್ಲಿ ಅನಂತಕೋಟಿ ಬ್ರಹ್ಮಾಂಡಗಳಿವೆ. ಒಂದು ಸೆಕೆಂಡಿಗೆ ಬೆಳಕಿನ ವೇಗ 1.86326 ಮೈಲಿ ಇಷ್ಟು ವೇಗವಾಗಿ ಆಕಾಶದ ಕಡೆ ಯಾವುದಾದರೂ ಅಂತರಿಕ್ಷಯಾನ ದಲ್ಲಿ ಹೊರಟರೆ ಸುಮಾರು ಒಂದು ಕೋಟಿ ವರ್ಷ ಹೋದರು ಮುಟ್ಟಲಿಕ್ಕೆ ಆಗದಷ್ಟು ಅನಂತ ಬ್ರಹ್ಮಾಂಡಗಳು ಆಕಾಶಗಂಗೆಯಲ್ಲಿ ಅಡಗಿವೆ. ನಾವು ಬದುಕುವುದು ಸುಮಾರು 100 ವರ್ಷ ನಮ್ಮಿಂದ ಬ್ರಹ್ಮಾಂಡದ ಸಂಪೂರ್ಣ ಅಧ್ಯಯನ ಅಸಾಧ್ಯವೆಂದು ವಿಜ್ಞಾನಿಗಳ ಅಭಿಪ್ರಾಯ. ಇನ್ನು ಅಂತಹ ಬ್ರಹ್ಮಾಂಡದಲ್ಲಿ ಜೀವಿಗಳು ಇದ್ದಾರೆಯೇ ಅಥವಾ ಇಲ್ಲವೊ ಎನ್ನುವುದರಲ್ಲಿಯ ಸಹ ಸ್ಪಷ್ಟ ನಿಲುವು ತಾಳಿಲ್ಲ.

ಈ ವಿಷಯದ ಬಗ್ಗೆ ಶರಣರು ಅನಂತ ಬ್ರಹ್ಮಾಂಡಗಳ ಬಗ್ಗೆ ವಚನಗಳಲ್ಲಿ ತಿಳಿಸಿದ್ದಾರೆ. ಬಸವಣ್ಣನವರು, ಚೆನ್ನಬಸವಣ್ಣನವರು, ಪ್ರಭುದೇವರು, ಸಿದ್ಧರಾಮೇಶ್ವರರು, ಅಕ್ಕಮಹಾದೇವಿ, ಮಡಿವಾಳ ಮಾಚಿದೇವರು ಎಡೆಯೂರು ಸಿದ್ಧಲಿಂಗೇಶ್ವರರು, ಬಾಲಸಂಗಯ್ಯ, ಷಣ್ಮುಖಸ್ವಾಮಿಗಳು, ಕಾಡ ಸಿದ್ಧೇಶ್ವರರು, ಇತ್ಯಾದಿ ಅನೇಕ ಶರಣ ಶರಣೆಯರು ಬ್ರಹ್ಮಾಂಡದ ಬಗ್ಗೆ ಲೋಕಂಗಳ ಬಗ್ಗೆ ತ್ರಿಳಿಸಿದ್ದಾರೆ. ವಿಜ್ಞಾನಿಗಳಿಗಿಂತಲೂ ಮಿಗಿಲಾದ ವಿಷಯವನ್ನು ತಿಳಿಸಿದ್ದಾರೆ. ಬ್ರಹ್ಮಾಂಡ ದಲ್ಲಿ ಇರುವ ಜೀವಿಗಳು ಅವರ ಆಯುಷ್ಯ ಮತ್ತು ಅಲ್ಲಿರುವ ಸಮುದ್ರ ಪರ್ವತಗಳ ವರ್ಣನೆಯನ್ನು ಮಾಡಿದ್ದಾರೆ. ಇದು ಶಿವಯೋಗದ ಮೂಲಕ ಸಾಧ್ಯವಿದೆ. ಪಾಮರರಾದ ನಮಗೆ ಶರಣರ ನೆಲೆಯನ್ನು ತ್ರಿಳಿಯುವುದು ಅಸಾಧ್ಯವಾಗಿದೆ. ಅವರ ವಚನಗಳನ್ನು ಸಹ ಸರಿಯಾಗಿ ತ್ರಿಳಿದುಕೊಳ್ಳಲಾಗುತ್ತಿಲ್ಲ. ಲಿಂಗಾಂಗ ಸಾಮರಸ್ಯ ಪಡೆದ ಶಿವಯೋಗಿಯ ನೆಲೆಯನ್ನು ಕೇವಲ ದೇಹದ ಮೇಲೆ ಲಾಂಛನ ದಾರಿಗಳಾಗಿ ಮೆರೆಯುವ ನಮಗೆ ಶರಣರ ಔನ್ನತ್ಯ ತಿಳಿಯದು.

ಮೈಲಾಸ ಬಸವಲಿಂಗ ಶರಣರು 'ಹದಿನಾಲ್ಕು ಭುವನ ತುಂಬಿದಿದೊಂದು ಬ್ರಹ್ಮಾಂಡವದರಂತೆ ತೋರ್ಪವ ಗಣಿತ ಬ್ರಹ್ಮಾಂಡಕ್ಕ ಧಿಕಾರಿ ಗುರುವೆ ಕೃಪೆಯಾಗು ಎಂದು ಹೇಳಿದ್ದಾರೆ. ಬಾಲಸಂಗಯ್ಯ ಶರಣರು ಎರಡುನೂರ ಇಪ್ಪತ್ತಾಲ್ಕು ವಚನಗಳಲ್ಲಿ ಎರಡುನೂರ ಇಪ್ಪತ್ನಾಲ್ಕು ಭುವನಗಲನ್ನು ತಿಳಿಸಿದ್ದಾರೆ. ಅಲ್ಲಿರುವ ಜೀವಿಗಳ ಬಗ್ಗೆಯೂ ಹೇಳಿದ್ದಾರೆ. ಮೊದಲಿಗೆ ಅವರ ಕೆಲವು ವಚನಗಳನ್ನು ನೋಡಿ ನಂತರ ಬೇರೆ ಬೇರೆ ಶರಣರು ಬ್ರಹ್ಮಾಂಡದ ಬಗ್ಗೆ ಹೇಗೆ ಹೇಳಿದ್ದಾರೆ ಎನ್ನುವುದನ್ನು ನೋಡೋಣ.

*ಇನ್ನೂರ ಇಪ್ಪತ್ನಾಲ್ಕು ಮಹಾಭುವನಂಗಳ ವಿಸ್ತೀರ್ಣವನು.*
*ಆ ಭುವನ ಭುವನಂಗಳಲ್ಲಿಹ ಭೂವನಾಧಿಪತಿಗಳನು.*
*ಆ ಭುವನಾಧಿಪತಿಗಳಲ್ಲಿ ಜಲಂಗಗೊಟ್ಟಿಹ ಬ್ರಹ್ಮಗಣ*
*ವಿಷ್ಣುಗಣ ರುದ್ರಗಣ ದೇವಗಣ ವೇದಗಣ ಮುನಿಗಣಂಗಳು*
*ಮೊದಲಾಗಿ ಎಲ್ಲಾ ಗಣಂಗಳು ಪ್ರಮಣವ ಪ್ರಮಾಣಿಸಿ*
*ಮತ್ತಂ ಆದಿ ಮೂಲ ಅನಾದಿ ಮೂಲಂಗಳಿಗತ್ತತ್ತವಾದ*
*ಮಹಾಮೂಲಸ್ವಾಮಿಯ ಮೀರಿದ*
*ಅತೀವಮೂಲ ಮಹಾ ಸ್ವಾಮಿಗತ್ತತ್ತವಾಗಿಹ ಅಖಂಡ*
*ಮಹಾಮೂಲ ಸ್ವಾಮಿ, ರೂಪು ಲಾವಣ್ಯ ಸೌಂದರ್ಯ ಅಂಗ*
*ಪ್ರತ್ಯಂಗ ಸ್ವರೂಪವಪ್ಪ*
*ಭಾವಂಗಳ ಹೇಳುತ್ತಿಹೆನು ಚಿತ್ತೈಸುವುದಯ್ಯ ಶರಣ ಗಣಂಗಳು*
*ಅಪ್ರಮಾಣ ಕೂಡಲಸಂಗಮದೇವಾ.*

*ಇನ್ನೂರ ಇಪ್ಪತ್ತಾಲ್ಕು ಭುವನಂಗಳು ಆ ಭುವನಾಧಿಪತಿಗಳ*
*ಆ ಭುವನಂಗಳ ವಿಸ್ತೀರ್ಣವೆಂತೆಂದೊಡೆ.*
*ಚತುರ್ದಶ ಭುವನಂಗಳ ಸಪ್ತ ಸಮುದ್ರಂಗಳ*
*ಸಪ್ತ ದ್ವೀಪಂಗಳ ಸಪ್ತ ಕುಲಪರ್ವತಂಗಳ*
*ಸಪ್ತ ಗ್ರಹರಾಶಿ ತಾರಾಪಥಂಗಳನು ಗರ್ಭೀಕರಿಸಿಅ ಬ್ರಹ್ಮಾಂಡ*
*ಅಂಥ ಬ್ರಹ್ಮಾಂಡವ ಸಾವಿರದೆಂಟು ಬ್ರಹ್ಮಾಂಡವನೊಳ*
*ಕೊಂಡುದೊಂದು ಅನಾಶ್ರಿತವೆಂಬ ಭುವನ*
*ಆ ಭುವನದೊಳು ಅನಂಗೇಶ್ವರನೆಂಬ ರುದ್ರಮೂರ್ತಿ ಇಹನು*
*ಆ ರುದ್ರ ಮೂರ್ತಿಯ ಓಲಗದಲ್ಲಿ*
*ಐದುಕೋಟಿ ರುದ್ರ ಬ್ರಹ್ಮನಾರಾಯನರು.*
*ಐದು ಕೋಟಿ ಇಂದ್ರ ಚಂದ್ರಾದಿತ್ಯರು*
*ಐದು ಕೋಟಿ ವೇದ ಪುರುಷರು ಮುನೀಂದ್ರರು.*
*ಮೂವತ್ತಾರು ಕೋಟಿ ದೇವರ್ಕಳಿಹರು ನೋಡಾ.*
*ಅಪ್ರಮಾಣ ಕೂಡಲಸಂಗಮದೇವಾ.*





## ವಿಶ್ವದ ಮಹಿಳಾ ಅನುಭಾವಿಗಳು

ಮಾಲಿಕೆ – 4

### 'ಮಹಾರಾಷ್ಟ್ರದ ಸಂತ ಮಹಿಳೆ ಬಹನಾಬಾಯಿ'

– ಡಾ|| ಕೆ.ಎಸ್. ರತ್ನಮ್ಮ,
ಪ್ರಾಂಶುಪಾಲರು,
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ,
ಮೈಸೂರು-೫೭೦ ೦೦೯, ದೂ: ೨೫೪೫೧೦೯

ಆಧ್ಯಾತ್ಮ ಸಾಧನೆಗೆ ಸಂಸಾರ ಅಡ್ಡಿಯಾಗದು. ಸಂಸಾರ ದಲ್ಲಿದ್ದು ಆದರ್ಶ ಪತ್ನಿಯಾಗಿ ಕರ್ತವ್ಯ ನಿರ್ವಹಿಸುತ್ತಲೇ ಆಧ್ಯಾತ್ಮಿಕ ಜೀವನ, ಭೌತಿಕ ವಸ್ತುಗಳ ತ್ಯಾಗದ ಮೂಲಕ ಆತ್ಮದರ್ಶನ ಸಾಧಿಸಿಕೊಳ್ಳಬಹುದು ಎಂಬುದನ್ನು ಶ್ರುತ ಪಡಿಸುವ ಮಹಾರಾಷ್ಟ್ರದ ಸಂತ ಮಹಿಳೆ ಬಹನಬಾಯಿಯ ಜೀವನ-ಸಾಧನೆ ವಿಶಿಷ್ಟವಾಗಿದೆ.

ಪ್ರಸಿದ್ಧ ಅಜಂತಾ-ಎಲ್ಲೋರ ದೇವಾಲಯಗಳ ಸ್ಥಳಕ್ಕೆ ಹತ್ತಿರ ಇರುವ ದೇವಗಾಂ ಎಂಬ ಪಟ್ಟಣದಲ್ಲಿ ೧೬೨೮ರಲ್ಲಿ ಬಹನಾಬಾಯಿ ಜನ್ಮ ತಳೆದಳು. ತಂದೆ ಆವೂಜಿ ಕುಲಕರ್ಣಿ, ತಾಯಿ ಜಾನಕಿಬಾಯಿ. ಇವರಿಗೆ ಬಹಳ ಕಾಲ ಮಕ್ಕಳಿರಲಿಲ್ಲ. ಸಂತಾನಾಪೇಕ್ಷಿಗಳಾಗಿ ತನ್ನೂರಿನ ಬಳಿ ಹರಿಯುತ್ತಿರುವ ಶಿವ ಅಥವಾ ಲಕ್ಷ ತೀರ್ಥ ಎಂಬ ನದಿಯಲ್ಲಿ ಮಿಂದು ಕಠಿಣ ವ್ರತ ಆಚರಿಸಿದರು. ಆಗ ಆವೂಜಿಗೆ ಒಂದೇ ಸಮನೆ ಮೂರು ಬಾರಿ ಕನಸು ಕಂಡನು. ಅದರಲ್ಲಿ ಒಬ್ಬ ಮಗಳು ಒಬ್ಬರು ಗಂಡು ಮಕ್ಕಳಾಗುವಂತೆ ಬ್ರಾಹ್ಮಣ ಸನ್ಯಾಸಿ ಹರಸುತ್ತಿರುವಂತೆ ಕಂಡ ಒಂದು ವರ್ಷದೊಳಗೆ ಮೊದಲು ಹೆಣ್ಣುಮಗು ಜನಿಸಿತು. ಅದಕ್ಕೆ 'ಬಹಿನಾ' ಎಂದು ನಾಮಕರಣ ಮಾಡಿದರು. ವಿಶ್ವೇಶ್ವರ ಎಂಬ ನಿಪುಣ ಜ್ಯೋತಿಷಿಯಿಂದ ಆಕೆಯ ಜಾತಕವನ್ನು ಬರೆಸಲು, ಆಕೆ ಮುಂದೆ ಮಹಿಮಾನ್ವಿತ ವ್ಯಕ್ತಿ ಆಗುತ್ತಾಳೆಂದು ಬರೆದಿದ್ದರು.

ಬಾಲ್ಯವಿವಾಹ ರೂಢಿಯಲ್ಲಿದ್ದ ಸಮಾಜ ಅದು. ಮಗಳಿಗೆ ನಾಲ್ಕು ವರ್ಷಕ್ಕೆ ವಿವಾಹ ಮಾಡಿದರು. ತಮ್ಮ ಸಂಬಂಧಿ ಶಿವಪುರದ ಮೂವತ್ತು ವರ್ಷದ ಗಂಗಾಧರ ಪಾಠಕ್‌ನೊಂದಿಗೆ ಮದುವೆ ಮಾಡಿಬಿಟ್ಟರು. ನಾಲ್ಕು ವರ್ಷಗಳ ನಂತರ ಆಸ್ತಿ ವಿಚಾರವಾಗಿ ಮೇಲಿಂದ ಮೇಲೆ ಜಗಳವಾಗಿ ದಾಯಾದಿಗಳ ಮೋಸದಿಂದ ಆವೂಜಿ ಬಡತನ ದಲ್ಲಿ ನರಳಿದನು. ಅಳಿಯನು ಸಹಾಯಕ್ಕೆ ಬಂದರೂ, ನಿಭಾಯಿಸಲಾರದೆ ಮಧ್ಯರಾತ್ರಿಯಲ್ಲಿ ಊರು ಬಿಟ್ಟು ಹೊರಟು ಅನೇಕ ಕಷ್ಟಗಳಿಗೆ ಒಳಗಾದರು. ಹಸಿವು ತಾಳಲಾರದೆ ಭಿಕ್ಷೆ ಬೇಡುವಂತಹ ಪರಿಸ್ಥಿತಿ ಉಂಟಾಯಿತು. ಮಾರ್ಗಮಧ್ಯದಲ್ಲಿ ಅನೇಕ ಪವಿತ್ರ ಸ್ಥಳಗಳ ದರ್ಶನ ಪಡೆದರು. ಬಹೆನಾಳಿಗೆ ಪುಣ್ಯಸ್ಥಳಗಳನ್ನು ಕಂಡಾಗ ಆನಂದ ಉಂಟಾಗುತ್ತಿತ್ತು. ಪಂಡರ ಪುರದಲ್ಲಿ ಐದು ರಾತ್ರಿ ಕಳೆದರು. ಪಾಂಡುರಂಗನ ದರ್ಶನದಿಂದ ಪುಳಕಿತರಾದರು. ಬ್ರಾಹ್ಮಣರಾದ್ದರಿಂದ ಭಿಕ್ಷೆಗೆ ಬೆಯಿಸದ ಪದಾರ್ಥಗಳನ್ನು ಪಡೆಯುತ್ತಿದ್ದು, ರಹಿಮತ್‌ಪುರ ದಲ್ಲಿ ವಾಸಿಸಬೇಕಾಯಿತು. ಅಲ್ಲಿ ಪುರೋಹಿತನ ಗೈರುಹಾಜರಿ ಯಲ್ಲಿ ಪೌರೋಹಿತ್ಯ ಕೆಲಸ ಗಂಗಾಧರನಿಗೆ ದೊರೆತಿತ್ತು.

ಬಹನಾ ಆಗ ಹನ್ನೆರಡು ವರ್ಷದ ಹೆಂಗಸು. ಅವಳಿಗೆ ದೇವರ ಕಥೆ ಕೇಳಬೇಕೆಂಬ, ಸನ್ಯಾಸಿಗಳೊಂದಿಗಿರಬೇಕೆಂಬ ಅಪೇಕ್ಷೆ ಹೆಚ್ಚಿತು. ಅವಳ ವಯಸ್ಸಿನ ಹೆಣ್ಣುಮಕ್ಕಳು ಆಟವಾಡಲು ಬಂದರೆ ಈಕೆ ದೇವರ ಬಗ್ಗೆ ಚಿಂತಿಸುತ್ತಿದ್ದಳು. ಬದುಕಿನ ಈ ದೇವರ ವ್ಯಾಮೋಹವೇ ಗಾಢ ಅನುರಕ್ತಿಯಾಗಿ, ಪೂಜೆ, ಧ್ಯಾನಗಳೇ ಅವಳಿಗೆ ಪ್ರಿಯವಾದುವು. ಖಾಯಂ ಪುರೋಹಿತ ಬಂದ ಮೇಲೆ ಗಂಗಾಧರನ ಕೆಲಸ ಹೋಯಿತು. ಜೀವನೋಪಾಯಕ್ಕೆ ಕೊಲ್ಲಾಪುರಕ್ಕೆ ಬಂದು ನೆಲಸಿದರು.

ಕೊಲ್ಲಾಪುರದಲ್ಲಿ ಆಗ ವೇದಶಾಸ್ತ್ರಪಾರಂಗತನಾದ ಬಹಿರಾಂಭಟ್ಟನೆಂಬ ಬ್ರಾಹ್ಮಣನಿದ್ದ. ಅವರ ಮನೆಯ ಒಂದು ಭಾಗದಲ್ಲಿ ಇವರಿಗೆ ಆಶ್ರಯ ನೀಡಿದನು. ಅವನ ಮನೆಯಲ್ಲಿ ನಡೆಯುತ್ತಿದ್ದ ಪುರಾಣ ಪುಣ್ಯಕಥೆಗಳು, ಹರಿಕೀರ್ತನೆಗಳನ್ನು ಕೇಳುವ ಅವಕಾಶ ದೊರೆಯಿತು. ಭಾಗವತ, ಪುರಾಣದ ಕಥೆಗಳನ್ನು ಹೇಳುತ್ತಿದ್ದ ಜೈರಾಂ ಸ್ವಾಮಿಯ ಪ್ರವಚನಗಳಿಂದ ಬಹನಾ ಆಧ್ಯಾತ್ಮದಲ್ಲಿ ಮನಸ್ಸು ತೊಡಗಿಸಿಕೊಂಡಳು. ಅವನ ಕೀರ್ತನೆಗಳನ್ನು ತಾನೂ ಹಾಡಿಕೊಳ್ಳುತ್ತಾ ಧ್ಯಾನಪರಳಾಗುತ್ತಿದ್ದಳು.

ಒಮ್ಮೆ ಬಹಿರಾಂಭಟ್ಟನಿಗೆ ದಾನವಾಗಿ ಒಂದು ಕಪ್ಪು ಹಸು ದೊರೆಯಿತು. ಅದಕ್ಕೆ ಹಲದಿ ರೇಶಿಮೆ ಉಡುಪು ಧರಿಸಿ, ಕೊಂಬುಗಳಿಗೆ ಬಂಗಾರದ ಮುಲಾಮು, ಪಾದಗಳಿಗೆ ರಜತ ವರ್ಣದ ಮುಲಾಮು ಹಚ್ಚಿದ್ದರು. ಅದಕ್ಕೆ ಒಂದು ಕಪ್ಪು ಕರು ಹುಟ್ಟಿದ ಹತ್ತು ದಿನಗಳ ಮೇಲೆ ಆತನಿಗೆ ಅದನ್ನು ಗಂಗಾಧರನಿಗೆ ಬಳುವಳಿ ಕೊಡಲು ಪ್ರೇರಣೆಯಾಗಿ ಕೊಟ್ಟು ಬಿಟ್ಟನು. ಇದರಿಂದ ಗಂಗಾಧರನ ಸಂಸಾರ ಸಂತಸ ಪಟ್ಟಿತು. ಕರುವಂತೂ ಬಹೆನಾಳನ್ನು ಹಚ್ಚಿಕೊಂಡು ಅವಳ ಜತೆಯಲ್ಲಿಯೇ ಚಲಿಸುತ್ತಿತ್ತು. ಅವಳಿಂದಲೇ ನೀರು, ಗರಿಕೆ ತಿನ್ನುತ್ತಿತ್ತು. ಆ ಕರುವಿನ ಎಲ್ಲ ಕ್ರಿಯೆ, ಚಟುವಟಿಕೆ ಬಹನಾಳಿಗೆ ಅರ್ಥವಾಗು ತ್ತಿತ್ತು. ಪವಿತ್ರ ಕೀರ್ತನೆಗಳನ್ನು ಕರು ಭಕ್ತಿಯಿಂದ ಆಲಿಸುತ್ತಿದ್ದುದು ಅವಳ ಜತೆ ಕೀರ್ತನೆ ಕೇಳಲು ಹೋದಾಗ ಅದೂ ಜತೆಗೆ ಹೋಗಿ ನೊಡುತ್ತಾ ನಿಲ್ಲುತ್ತಿತ್ತು. ಜನರು ಬಹನಾ, ಆ ಕರುವಿನಲ್ಲಿ ಯೋಗಾತ್ಮವನ್ನು ಕಂಡರು.



# ವಿಶ್ವದ ಮಹಿಳಾ ಅನುಭಾವಿಗಳು

ಮಾಲಿಕೆ – 4

## 'ಮಹಾರಾಷ್ಟ್ರದ ಸಂತ ಮಹಿಳೆ ಬಹನಾಬಾಯಿ'

– ಡಾ|| ಕೆ.ಎಸ್. ರತ್ನಮ್ಮ,
ಪ್ರಾಂಶುಪಾಲರು,
೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ,
ಮೈಸೂರು–೫೭೦ ೦೦೯, ದೂ: ೨೫೪೪೫೭೮೯

ಆಧ್ಯಾತ್ಮ ಸಾಧನೆಗೆ ಸಂಸಾರ ಅಡ್ಡಿಯಾಗದು. ಸಂಸಾರದಲ್ಲಿದ್ದು ಆದರ್ಶ ಪತ್ನಿಯಾಗಿ ಕರ್ತವ್ಯ ನಿರ್ವಹಿಸುತ್ತಲೇ ಆಧ್ಯಾತ್ಮಿಕ ಜೀವನ, ಭೌತಿಕ ವಸ್ತುಗಳ ತ್ಯಾಗದ ಮೂಲಕ ಆತ್ಮದರ್ಶನ ಸಾಧಿಸಿಕೊಳ್ಳಬಹುದು ಎಂಬುದನ್ನು ಶ್ರುತಪಡಿಸುವ ಮಹಾರಾಷ್ಟ್ರದ ಸಂತ ಮಹಿಳೆ ಬಹನಬಾಯಿಯ ಜೀವನ–ಸಾಧನೆ ವಿಶಿಷ್ಟವಾಗಿದೆ.

ಪ್ರಸಿದ್ಧ ಅಜಂತಾ–ಎಲ್ಲೋರ ದೇವಾಲಯಗಳ ಸ್ಥಳಕ್ಕೆ ಹತ್ತಿರ ಇರುವ ದೇವಗಾಂ ಎಂಬ ಪಟ್ಟಣದಲ್ಲಿ ೧೬೨೮ರಲ್ಲಿ ಬಹನಾಬಾಯಿ ಜನ್ಮ ತಳೆದಳು. ತಂದೆ ಆವೂಜಿ ಕುಲಕರ್ಣಿ, ತಾಯಿ ಜಾನಕಿಬಾಯಿ. ಇವರಿಗೆ ಬಹಳ ಕಾಲ ಮಕ್ಕಳಿರಲಿಲ್ಲ. ಸಂತಾನಾಪೇಕ್ಷಿಗಳಾಗಿ ತನ್ನೂರಿನ ಬಳಿ ಹರಿಯುತ್ತಿರುವ ಶಿವ ಅಥವಾ ಲಕ್ಷ ತೀರ್ಥ ಎಂಬ ನದಿಯಲ್ಲಿ ಮಿಂದು ಕಠಿಣ ವ್ರತ ಆಚರಿಸಿದರು. ಆಗ ಆವೂಜಿಗೆ ಒಂದೇ ಸಮನೆ ಮೂರು ಬಾರಿ ಕನಸು ಕಂಡನು. ಅದರಲ್ಲಿ ಒಬ್ಬ ಮಗಳು ಒಬ್ಬರು ಗಂಡು ಮಕ್ಕಳಾಗುವಂತೆ ಬ್ರಾಹ್ಮಣ ಸನ್ಯಾಸಿ ಹರಸುತ್ತಿರುವಂತೆ ಕಂಡ ಒಂದು ವರ್ಷದೊಳಗೆ ಮೊದಲು ಹೆಣ್ಣುಮಗು ಜನಿಸಿತು. ಅದಕ್ಕೆ 'ಬಹಿನಾ' ಎಂದು ನಾಮಕರಣ ಮಾಡಿದರು. ವಿಶ್ವೇಶ್ವರ ಎಂಬ ನಿಪುಣ ಜ್ಯೋತಿಷಿಯಿಂದ ಆಕೆಯ ಜಾತಕವನ್ನು ಬರೆಸಲು, ಆಕೆ ಮುಂದೆ ಮಹಿಮಾನ್ವಿತ ವ್ಯಕ್ತಿ ಆಗುತ್ತಾಳೆಂದು ಬರೆದಿದ್ದರು.

ಬಾಲ್ಯವಿವಾಹ ರೂಢಿಯಲ್ಲಿದ್ದ ಸಮಾಜ ಅದು. ಮಗಳಿಗೆ ನಾಲ್ಕು ವರ್ಷಕ್ಕೆ ವಿವಾಹ ಮಾಡಿದರು. ತಮ್ಮ ಸಂಬಂಧಿ ಶಿವಪುರದ ಮೂವತ್ತು ವರ್ಷದ ಗಂಗಾಧರ ಪಾಠಕ್‌ನೊಂದಿಗೆ ಮದುವೆ ಮಾಡಿಬಿಟ್ಟರು. ನಾಲ್ಕು ವರ್ಷಗಳ ನಂತರ ಆಸ್ತಿ ವಿಚಾರವಾಗಿ ಮೇಲಿಂದ ಮೇಲೆ ಜಗಳವಾಗಿ ದಾಯಾದಿಗಳ ಮೋಸದಿಂದ ಆವೂಜಿ ಬಡತನದಲ್ಲಿ ನರಳಿದನು. ಅಳಿಯನು ಸಹಾಯಕ್ಕೆ ಬಂದರೂ, ನಿಭಾಯಿಸಲಾರದೆ ಮಧ್ಯರಾತ್ರಿಯಲ್ಲಿ ಊರು ಬಿಟ್ಟು ಹೊರಟು ಅನೇಕ ಕಷ್ಟಗಳಿಗೆ ಒಳಗಾದರು. ಹಸಿವು ತಾಳಲಾರದೆ ಭಿಕ್ಷೆ ಬೇಡುವಂತಹ ಪರಿಸ್ಥಿತಿ ಉಂಟಾಯಿತು. ಮಾರ್ಗಮಧ್ಯದಲ್ಲಿ ಅನೇಕ ಪವಿತ್ರ ಸ್ಥಳಗಳ ದರ್ಶನ ಪಡೆದರು. ಬಹನಾಳಿಗೆ ಪುಣ್ಯಸ್ಥಳಗಳನ್ನು ಕಂಡಾಗ ಆನಂದ ಉಂಟಾಗುತ್ತಿತ್ತು. ಪಂಡರಪುರದಲ್ಲಿ ಐದು ರಾತ್ರಿ ಕಳೆದರು. ಪಾಂಡುರಂಗನ ದರ್ಶನದಿಂದ ಪುಳಕಿತರಾದರು. ಬ್ರಾಹ್ಮಣರಾದ್ದರಿಂದ ಭಿಕ್ಷೆಗೆ ಬೆಯಿಸದ ಪದಾರ್ಥಗಳನ್ನು ಪಡೆಯುತ್ತಿದ್ದು, ರಹಿಮತ್‌ಪುರದಲ್ಲಿ ವಾಸಿಸಬೇಕಾಯಿತು. ಅಲ್ಲಿ ಪುರೋಹಿತನ ಗೈರುಹಾಜರಿಯಲ್ಲಿ ಪೌರೋಹಿತ್ಯ ಕೆಲಸ ಗಂಗಾಧರನಿಗೆ ದೊರೆತಿತ್ತು.

ಬಹನಾ ಆಗ ಹನ್ನೆರಡು ವರ್ಷದ ಹೆಂಗಸು. ಅವಳಿಗೆ ದೇವರ ಕಥೆ ಕೇಳಬೇಕೆಂಬ, ಸನ್ಯಾಸಿಗಳೊಂದಿಗಿರಬೇಕೆಂಬ ಅಪೇಕ್ಷೆ ಹೆಚ್ಚಿತು. ಅವಳ ವಯಸ್ಸಿನ ಹೆಣ್ಣುಮಕ್ಕಳು ಆಟವಾಡಲು ಬಂದರೆ ಈಕೆ ದೇವರ ಬಗ್ಗೆ ಚಿಂತಿಸುತ್ತಿದ್ದಳು. ಬದುಕಿನ ಈ ದೇವರ ವ್ಯಾಮೋಹವೇ ಗಾಢ ಅನುರಕ್ತಿಯಾಗಿ, ಪೂಜೆ, ಧ್ಯಾನಗಳೇ ಅವಳಿಗೆ ಪ್ರಿಯವಾದುವು. ಖಾಯಂ ಪುರೋಹಿತ ಬಂದ ಮೇಲೆ ಗಂಗಾಧರನ ಕೆಲಸ ಹೋಯಿತು. ಜೀವನೋಪಾಯಕ್ಕೆ ಕೊಲ್ಹಾಪುರಕ್ಕೆ ಬಂದು ನೆಲಸಿದರು.

ಕೊಲ್ಹಾಪುರದಲ್ಲಿ ಆಗ ವೇದಶಾಸ್ತ್ರಪಾರಂಗತನಾದ ಬಹಿರಾಂಭಟ್ಟನೆಂಬ ಬ್ರಾಹ್ಮಣನಿದ್ದ. ಅವರ ಮನೆಯ ಒಂದು ಭಾಗದಲ್ಲಿ ಇವರಿಗೆ ಆಶ್ರಯ ನೀಡಿದನು. ಅವನ ಮನೆಯಲ್ಲಿ ನಡೆಯುತ್ತಿದ್ದ ಪುರಾಣ ಪುಣ್ಯಕಥೆಗಳು, ಹರಿಕೀರ್ತನೆಗಳನ್ನು ಕೇಳುವ ಅವಕಾಶ ದೊರೆಯಿತು. ಭಾಗವತ, ಪುರಾಣದ ಕಥೆಗಳನ್ನು ಹೇಳುತ್ತಿದ್ದ ಜೈರಾಂ ಸ್ವಾಮಿಯ ಪ್ರವಚನಗಳಿಂದ ಬಹನಾ ಆಧ್ಯಾತ್ಮದಲ್ಲಿ ಮನಸ್ಸು ತೊಡಗಿಸಿಕೊಂಡಳು. ಅವನ ಕೀರ್ತನೆಗಳನ್ನು ತಾನೂ ಹಾಡಿಕೊಳ್ಳುತ್ತಾ, ಧ್ಯಾನಪರಳಾಗುತ್ತಿದ್ದಳು.

ಒಮ್ಮೆ ಬಹಿರಾಂಭಟ್ಟನಿಗೆ ದಾನವಾಗಿ ಒಂದು ಕಪ್ಪು ಹಸು ದೊರೆಯಿತು. ಅದಕ್ಕೆ ಹಲದಿ ರೇಶಿಮೆ ಉಡುಪು ಧರಿಸಿ, ಕೊಂಬುಗಳಿಗೆ ಬಂಗಾರದ ಮುಲಾಮು, ಪಾದಗಳಿಗೆ ರಜತ ವರ್ಣದ ಮುಲಾಮು ಹಚ್ಚಿದ್ದರು. ಅದಕ್ಕೆ ಒಂದು ಕಪ್ಪು ಕರು ಹುಟ್ಟಿದ ಹತ್ತು ದಿನಗಳ ಮೇಲೆ ಆತನಿಗೆ ಅದನ್ನು ಗಂಗಾಧರನಿಗೆ ಬಳುವಳಿ ಕೊಡಲು ಪ್ರೇರಣೆಯಾಗಿ ಕೊಟ್ಟುಬಿಟ್ಟನು. ಇದರಿಂದ ಗಂಗಾಧರನ ಸಂಸಾರ ಸಂತಸ ಪಟ್ಟಿತು. ಕರುವಂತೂ ಬಹನಾಳನ್ನು ಹಚ್ಚಿಕೊಂಡು ಅವಳ ಜತೆಯಲ್ಲಿಯೇ ಚಲಿಸುತ್ತಿತ್ತು. ಅವಳಿಂದಲೇ ನೀರು, ಗರಿಕೆ ತಿನ್ನುತ್ತಿತ್ತು. ಆ ಕರುವಿನ ಎಲ್ಲ ಕ್ರಿಯೆ, ಚಟುವಟಿಕೆ ಬಹನಾಳಿಗೆ ಅರ್ಥವಾಗುತ್ತಿತ್ತು. ಪವಿತ್ರ ಕೀರ್ತನೆಗಳನ್ನು ಕರು ಭಕ್ತಿಯಿಂದ ಆಲಿಸುತ್ತಿದ್ದುದು ಅವಳ ಜತೆ ಕೀರ್ತನೆ ಕೇಳಲು ಹೋದಾಗ ಅದೂ ಜತೆಗೆ ಹೋಗಿ ನೊಡುತ್ತಾ ನಿಲ್ಲುತ್ತಿತ್ತು. ಜನರು ಬಹನಾ, ಆ ಕರುವಿನಲ್ಲಿ ಯೋಗಾತ್ಮವನ್ನು ಕಂಡರು.





ಬಹನಾಳ ಈ ಕರುವಿನ ವೃತ್ತಾಂತದ ಬಗ್ಗೆ ಎಲ್ಲರೂ ಮಾತನಾಡಲು ಆರಂಭಿಸಿದರು. ಸಿಟ್ಟಿಗೆದ್ದ ಗಂಗಾಧರ ಬಹನಾಳ ಬಗ್ಗೆ ಟೀಕೆ ಸಹಿಸದೆ ಅವಳಿಗೆ ಹೊಡೆದನು. ಬಹನಾ ನೋವಿನಿಂದ ಯಾತನೆಯೊಳಗಾದಾಗ ಹಸು–ಕರುಗಳು ಗೋಳಾಡಿದವು. ಹನ್ನೊಂದು ವರ್ಷದ ಬಹನಾ ಮುವತ್ತೇಳು ವರ್ಷದ ಗಂಡನ ಕ್ರೂರ ವರ್ತನೆ ಬಗ್ಗೆ ಏನೂ ಮಾಡುವಂತಿಲ್ಲ. ಅವಳ ತಂದೆ ತಾಯಿಗಳು ಅವನನ್ನು ಕೇಳಲು ಜೈರಾಂ ಸ್ವಾಮಿಯ ಕೀರ್ತನೆ ಕೇಳಲು ಹೆಂಡತಿ ಹೋಗುವುದು ಇಷ್ಟವಿರಲಿಲ್ಲ ಎಂದು ಅಗಿಂದಾಗ್ಗೆ ಹೊಡೆಯುತ್ತಿದ್ದನು.

ಹೀಗಿರಲು ಕರುವಿಗೆ ರೋಗ ಬಂದಿತು. ಸಾಯುವ ಸಮಯದಲ್ಲಿ ಬಹನಾ ಅದರ ಬಳಿ ಕುಳಿತು ಅದರ ತುಟಿಗಳ ಚಲನೆ ಕಂಡು ಅದರ ಮಾತನ್ನು ಕೇಳಿಸಿಕೊಂಡಿದ್ದಳು. ದೇವರಿಗೆ ಅಂತಿಮ ಪ್ರಾರ್ಥನೆ ಸಲ್ಲಿಸಿ ಅದು ಪ್ರಾಣ ಬಿಟ್ಟಿತು. ಈ ಘಟನೆಯಿಂದ ನೊಂದ ಬಹನಾ ನಾಲ್ಕು ದಿನ ಪ್ರಜ್ಞೆಯಿಲ್ಲದೆ ಮಲಗಿದ್ದಳು. ನಾಲ್ಕನೇ ದಿನ ಕನಸಿನಲ್ಲಿ ಬ್ರಾಹ್ಮಣನು ಎಚ್ಚೆತ್ತು ಚಿಂತನಾಶೀಲಳಾಗು ಎಂದು ಹೇಳಿದಾಗ ಎಚ್ಚರಗೊಂಡಾಗ ಅವಳಿಗೆ ಪಾಂಡುರಂಗನೇ ಹೇಳಿದಂತೆ ಭಾಸವಾಗಿತ್ತು. ಆ ವೇಳೆಗೆ ಮಹಾರಾಷ್ಟ್ರದಲ್ಲಿ ಸಂತ ತುಕಾರಾಂ ಪ್ರಸಿದ್ಧರಾಗಿದ್ದರು. ಅವರನ್ನು ಕಾಣಲು ಬಯಸಿ ಆತನೇ ತನ್ನ ಗುರುವೆಂದು ಘೋಷಿಸಿದಳು.

ಆಧ್ಯಾತ್ಮ ವಿದ್ಯೆಯಲ್ಲಿ ತುಕಾರಾಂ ಬಹನಾಗೆ ಮಾರ್ಗದರ್ಶಕನಾದನು. ಬಹನಾಳ ಸಂತತನ ಕಂಡು ಜನರು ಬರತೊಡಗಿದರು. ಗಂಗಾಧರನಿಗೆ ತನ್ನ ಹೆಂಡತಿಯನ್ನು ಜನರು ಬಂದು ನೋಡುವುದು ಸಹ್ಯವಾಗಲಿಲ್ಲ. ಒಬ್ಬ ಬ್ರಾಹ್ಮಣನ ಹೆಂಡತಿ ಶೂದ್ರ ತುಕಾರಾಂನನ್ನು ಗುರುವಾಗಿ ಸ್ವೀಕರಿಸಿದ್ದು ಇಷ್ಟವಾಗಲಿಲ್ಲ. ಪುರುಷ ಸಹಜ ಅಹಂಕಾರ, ಹೆಂಡತಿ ಬಗ್ಗೆ ಜನರ ಗೌರವ ಕಂಡು ತುಂಬು ಗರ್ಭಿಣಿ ಪತ್ನಿಯನ್ನು ಬಿಟ್ಟು ತೀರ್ಥಯಾತ್ರೆ ಹೋಗಲು ನಿರ್ಧರಿಸಿದ. ಹೆಂಡತಿ ದೇವರನ್ನು ಹಚ್ಚಿಕೊಂಡು, ಗುರು ತುಕಾರಾಮನಿಗೆ ಗೌರವ ತೋರುತ್ತಿರುವುದರಿಂದ ತನ್ನ ಆತ್ಮಗೌರವಕ್ಕೆ ಕುಂದಾಗಿದೆ ಎಂದು ಅವರ ತಂದೆ ತಾಯಿಗೆ ತಿಳಿಸುತ್ತಾನೆ.

ಗಂಗಾಧರ ಹೊರಡುವ ರಾತ್ರಿ ಜ್ವರದಿಂದ ಬಳಲಿದನು. ಬಹನಾ ಹಗಲಿರುಳು ಅವನ ಸೇವೆ ಮಾಡಿದಳು. ತಾನು ಪಾಂಡುರಂಗನನ್ನು, ಅವನ ಭಕ್ತ ತುಕಾರಾಮನನ್ನು ನಿಂದಿಸಿದ ಫಲದಿಂದ ಹೀಗಾಯಿತೆಂದು ಪಶ್ಚಾತ್ತಾಪ ಪಟ್ಟನು. ಅವನ ಒಳಪ್ರಜ್ಞೆ ಹೆಂಡತಿಯ ಆಧ್ಯಾತ್ಮಿಕ ಬದುಕಿನೊಂದಿಗೆ ಸೇರಿಕೊಳ್ಳಲು ನುಡಿಯಿತು. ಆರೋಗ್ಯ ಸುಧಾರಿಸಿದಾಗ ಇನ್ನು ಮುಂದೆ ತಾನೂ ಹರಿಸೇವೆಗೆ ತನ್ನ ಬದುಕನ್ನು ಮೀಸಲಾಗಿರಿಸಿ ಹೆಂಡತಿಯೊಂದಿಗೆ ಕಾಡಿಗೆ ಹೋಗಲು ನಿರ್ಧರಿಸಿದನು. ಬಹನಾಳ ಕುಟುಂಬ ಪವಿತ್ರ ಸ್ಥಳ ದೇಹು ಗ್ರಾಮಕ್ಕೆ ಬಂದರು. ದೇವಾಲಯದಲ್ಲಿ ಸಂತ ತುಕಾರಾಮನನ್ನು ಕಂಡಾಗ ಬಹನಾ ಅವಳ ಪತಿ ಸಂತಸಪಟ್ಟರು.

ದೇಹುವಿನಲ್ಲಿ ಅವರು ಯಾತ್ರಾರ್ಥಿಗಳ ಜತೆ ಮನೆಯಲ್ಲಿ ತಂಗಿದರು. ತುಕಾರಾಮರ ಹರಿ ಕೀರ್ತನೆ ಕೇಳುತ್ತ ನೆಮ್ಮದಿಯಿಂದ ಕಾಲ ಕಳೆದರು. ಮುಂಬಾಜಿ ಎಂಬ ದುರಹಂಕಾರಿಗೆ ಸಂತ ತುಕಾರಾಮರ ಕೀರ್ತಿ, ಜನಪ್ರಿಯತೆ ಸಹಿಸಲಾಗದೆ ದ್ವೇಷದಿಂದ ಗಂಗಾಧರನಿಗೆ ಈ ಶೂದ್ರನನು ನೀನು ಬ್ರಾಹ್ಮಣರು ಹೇಗೆ ಗುರುವೆಂದು ಸ್ವೀಕರಿಸಿದಿರಿ? ನಿಮಗೆ ಬಹಿಷ್ಕಾರ ಹಾಕುತ್ತೇವೆ ಎಂದು ಅಪಮಾನಿಸಿದಾಗ ಬಹನಾ 'ಭಗವಂತನ ಪರೀಕ್ಷೆಗಳು ಹೀಗೆ ತೊಂದರೆಗಳಿಗೆ ಈಡು ಮಾಡುತ್ತವೆ' ಎಂದಳು. ಮಾಬಾಜಿಯು ಗಂಗಾಧರ, ಬಹನಾ ಮತ್ತು ತುಕರಾಂರ ವಿರುದ್ಧ ಪೂನಾದ ಅಪ್ಪಾಜಿಸ್ವಾಮಿಗೆ ಪತ್ರ ಬರೆದು ಶಿಕ್ಷೆ ವಿಧಿಸಲು ದೂರಿದ. ಅಪ್ಪಾಜಿಸ್ವಾಮಿ ಅವರನ್ನು ಊರು ಬಿಟ್ಟು ಹೋಗಲು ತಿಳಿಸಿದನು. ಅವರ ಬಳಿ ಇದ್ದ ಹಸುವನ್ನು ಅಪಹರಿಸಿ ಅದಕ್ಕೆ ಮೇವು, ನೀರು ಕೊಡದೆ ಹೊಡೆದನು. ಹಸುವಿಗೆ ಹೊಡೆದಾಗ ಉಂಟಾದ ಬೊಬ್ಬೆಗಳು ತುಕಾರಾಮನ ಮೈಮೇಲೆ ಕಾಣಿಸಿಕೊಂಡಿತು. ಮುಂಬಾಜಿಯ ಮನೆಯಲ್ಲಿ ಜ್ವಾಲೆ ಎದ್ದಾಗ ಜನ ಹಸುವನ್ನು ರಕ್ಷಿಸಿದರು. ಅದರ ಮೇಲಿನ ಹೊಡೆತದ ಗುರುತುಗಳು ತುಕಾರಾಮನ ಮೈಮೇಲೆ ಕಂಡು ಪಾಂಡುರಂಗನೇ ತುಕಾರಾಮನೆಂದು ಅರಿತರು.

ಬಹನಾಳಿಗೆ ಹೆಣ್ಣುಮಗು ಜನಿಸಿತು, ಆ ಕರುವೇ ತನ್ನ ಮಗಳಾಗಿ ಹುಟ್ಟಿದೆ ಎಂದು ಭಾವಿಸಿ ಸಂತಸಪಟ್ಟಳು. ಆಕೆಯ ಗಂಡ ವೇದಾಂತಿಯಾಗಿದ್ದರೂ ನೈಜ ಭಕ್ತಿ ಇರಲಿಲ್ಲ. ಬಹನಾಳಿಗೆ ವೈರಾಗ್ಯ ಹೊಂದದೆ ಆಧ್ಯಾತ್ಮಿಕ ಬದುಕು ಅಸಾಧ್ಯ ಎಂದು ನೊಂದು ಸಾಯಲು ವಿಫಲಳಾಗಿ ದೇವರ ಧ್ಯಾನ ಮಾಡಲು ಯತ್ನಿಸಿದಳು. ಗಂಡನಿಂದ ಅದೂ ಆಗುತ್ತಿರಲಿಲ್ಲ. ಕಡೆಗೆ ಆತ ಹೊರ ಊರಿಗೆ ಹೋದಾಗ ನಾಲ್ಕು ಗಂಟೆಗಳ ನಿರಂತರ ಧ್ಯಾನ ಮಾಡಿದಾಗ ಆಕೆಗೆ ತುಕಾರಾಂ ಕಾವ್ಯ ಸೃಷ್ಟಿ ಶಕ್ತಿ ನೀಡಿದಂತಾಗಿತ್ತು. ಸಂತನ ಸ್ಪರ್ಶಾನುಭವವಾಗಿ ಭಗವಂತನ ಇರುವಿಕೆ ಅನುಭವಿಸಿದಳು. ನದಿಯಲ್ಲಿ ಮಿಂದು ಬಂದವಳು ವಿಠೋಬನನ್ನು ಪೂಜಿಸಿ ಕುಳಿತಾಗ ಕಾವ್ಯ ರಚನಾಸ್ಫೂರ್ತಿಯಾಗಿ ಐದು ಪದ್ಯಗಳನ್ನು ರಚಿಸಿ ಆ ದೈವಕ್ಕೆ ಅರ್ಪಿಸಿದಳು.

ನಂತರ ದೇಹುವನ್ನು ಬಿಟ್ಟು ಬಂದ ಅವರ ಕುಟುಂಬ ಶಿವೂರಿನಲ್ಲಿ ನೆಲೆಸಿತು. ಆಗ ಮೌನವ್ರತ ಆಚರಿಸಿ ಆಧ್ಯಾತ್ಮಿಕವಾಗಿ ಮುಳುಗಿಹೋದಳು. ಗಂಡ, ತಂದೆ ತಾಯಿಗಳು ಮರಣಾನಂತರ ೧೬೪೯ರಲ್ಲಿ ಗುರುವಿನ ಅಗಲಿಕೆಯಿಂದ ಮರಳಿ ದೇಹುಗೆ ಬಂದು ಹದಿನೆಂಟು ದಿನ ಉಪವಾಸ ಮಾಡಿದಾಗ ತುಕಾರಾಂ ಕಾಣಿಸಿಕೊಂಡು ಅವಳಿಗೆ ಅಶೀರ್ವದಿಸಿದರು. ನಂತರ ಬಹನಾ ಸಂತ ರಾಮದಾಸರಲ್ಲಿ ತನ್ನ ಗುರುವನ್ನು ಕಂಡು ಭಕ್ತಿ ಗೌರವ ಅರ್ಪಿಸಿದಳು. ರಾಮದಾಸರು ೧೬೮೧ರಲ್ಲಿ ತೀರಿಕೊಂಡಾಗ ಆಕೆ ಶಿವೂರಿಗೆ ಮರಳಿದಳು.

ಬಹನಾಳ ಈ ಕರುವಿನ ವೃತ್ತಾಂತದ ಬಗ್ಗೆ ಎಲ್ಲರೂ ಮಾತನಾಡಲು ಆರಂಭಿಸಿದರು. ಸಿಟ್ಟಿಗೆದ್ದ ಗಂಗಾಧರ ಬಹನಾಳ ಬಗ್ಗೆ ಟೀಕೆ ಸಹಿಸದೆ ಅವಳಿಗೆ ಹೊಡೆದನು. ಬಹನಾ ನೋವಿನಿಂದ ಯಾತನೆಯೊಳಗಾದಾಗ ಹಸು-ಕರುಗಳು ಗೋಳಾಡಿದವು. ಹನ್ನೊಂದು ವರ್ಷದ ಬಹೆನಾ ಮುವತ್ತೇಳು ವರ್ಷದ ಗಂಡನ ಕ್ರೂರ ವರ್ತನೆ ಬಗ್ಗೆ ಏನೂ ಮಾಡುವಂತಿಲ್ಲ. ಅವಳ ತಂದೆ ತಾಯಿಗಳು ಅವನನ್ನು ಕೇಳಲು ಜೈರಾಂ ಸ್ವಾಮಿಯ ಕೀರ್ತನೆ ಕೇಳಲು ಹೆಂಡತಿ ಹೋಗುವುದು ಇಷ್ಟ ವಿರಲಿಲ್ಲ ಎಂದು ಅಗಿಂದಾಗ್ಗೆ ಹೊಡೆಯುತ್ತಿದ್ದನು.

ಹೀಗಿರಲು ಕರುವಿಗೆ ರೋಗ ಬಂದಿತು. ಸಾಯುವ ಸಮಯದಲ್ಲಿ ಬಹನಾ ಅದರ ಬಳಿ ಕುಳಿತು ಅದರ ತುಟಿಗಳ ಚಲನೆ ಕಂಡು ಅದರ ಮಾತನ್ನು ಕೇಳಿಸಿಕೊಂಡಿದ್ದಳು. ದೇವರಿಗೆ ಅಂತಿಮ ಪ್ರಾರ್ಥನೆ ಸಲ್ಲಿಸಿ ಅದು ಪ್ರಾಣ ಬಿಟ್ಟಿತು. ಈ ಘಟನೆಯಿಂದ ನೊಂದ ಬಹೆನಾ ನಾಲ್ಕು ದಿನ ಪ್ರಜ್ಞೆಯಿಲ್ಲದೆ ಮಲಗಿದ್ದಳು. ನಾಲ್ಕನೇ ದಿನ ಕನಸಿನಲ್ಲಿ ಬ್ರಾಹ್ಮಣನು ಎಚ್ಚೆತ್ತು ಚಿಂತನಾಶೀಲಳಾಗು ಎಂದು ಹೇಳಿದಾಗ ಎಚ್ಚರಗೊಂಡಾಗ ಅವಳಿಗೆ ಪಾಂಡುರಂಗನೇ ಹೇಳಿದಂತೆ ಭಾಸವಾಗಿತ್ತು. ಆ ವೇಳೆಗೆ ಮಹಾರಾಷ್ಟ್ರದಲ್ಲಿ ಸಂತ ತುಕಾರಾಂ ಪ್ರಸಿದ್ಧರಾಗಿದ್ದರು. ಅವರನ್ನು ಕಾಣಲು ಬಯಸಿ ಆತನೇ ತನ್ನ ಗುರುವೆಂದು ಘೋಷಿಸಿದಳು.

ಆಧ್ಯಾತ್ಮ ವಿದ್ಯೆಯಲ್ಲಿ ತುಕಾರಾಂ ಬಹನಾಗೆ ಮಾರ್ಗದರ್ಶಕ ನಾದನು. ಬಹನಾಳ ಸಂತತನ ಕಂಡು ಜನರು ಬರತೊಡಗಿದರು. ಗಂಗಾಧರನಿಗೆ ತನ್ನ ಹೆಂಡತಿಯನ್ನು ಜನರು ಬಂದು ನೋಡುವುದು ಸಹ್ಯವಾಗಲಿಲ್ಲ. ಒಬ್ಬ ಬ್ರಾಹ್ಮಣನ ಹೆಂಡತಿ ಶೂದ್ರ ತುಕಾರಾಂನನ್ನು ಗುರುವಾಗಿ ಸ್ವೀಕರಿಸಿದ್ದು ಇಷ್ಟವಾಗಲಿಲ್ಲ. ಪುರುಷ ಸಹಜ ಅಹಂಕಾರ, ಹೆಂಡತಿ ಬಗ್ಗೆ ಜನರ ಗೌರವ ಕಂಡು ತುಂಬು ಗರ್ಭಿಣಿ ಪತ್ನಿಯನ್ನು ಬಿಟ್ಟು ತೀರ್ಥಯಾತ್ರೆ ಹೋಗಲು ನಿರ್ಧರಿಸಿದ. ಹೆಂಡತಿ ದೇವರನ್ನು ಹಚ್ಚಿಕೊಂಡು, ಗುರು ತುಕಾರಾಮನಿಗೆ ಗೌರವ ತೋರುತ್ತಿರು ವುದರಿಂದ ತನ್ನ ಆತ್ಮಗೌರವಕ್ಕೆ ಕುಂದಾಗಿದೆ ಎಂದು ಅವರ ತಂದೆ ತಾಯಿಗೆ ತಿಳಿಸುತ್ತಾನೆ.

ಗಂಗಾಧರ ಹೊರಡುವ ರಾತ್ರಿ ಜ್ವರದಿಂದ ಬಳಲಿದನು. ಬಹನಾ ಹಗಲಿರುಳು ಅವನ ಸೇವೆ ಮಾಡಿದಳು. ತಾನು ಪಾಂಡುರಂಗನನ್ನು, ಅವನ ಭಕ್ತ ತುಕಾರಾಮನನ್ನು ನಿಂದಿಸಿದ ಫಲದಿಂದ ಹೀಗಾಯಿತೆಂದು ಪಶ್ಚಾತ್ತಾಪ ಪಟ್ಟನು. ಅವನ ಒಳಪ್ರಜ್ಞೆ ಹೆಂಡತಿಯ ಆಧ್ಯಾತ್ಮಿಕ ಬದುಕಿನೊಂದಿಗೆ ಸೇರಿಕೊಳ್ಳಲು ನುಡಿಯಿತು. ಆರೋಗ್ಯ ಸುಧಾರಿಸಿದಾಗ ಇನ್ನು ಮುಂದೆ ತಾನೂ ಹರಿಸೇವೆಗೆ ತನ್ನ ಬದುಕನ್ನು ಮೀಸಲಾಗಿರಿಸಿ ಹೆಂಡತಿಯೊಂದಿಗೆ ಕಾಡಿಗೆ ಹೋಗಲು ನಿರ್ಧರಿಸಿದನು. ಬಹನಾಳ ಕುಟುಂಬ ಪವಿತ್ರ ಸ್ಥಳ ದೇಹು ಗ್ರಾಮಕ್ಕೆ ಬಂದರು. ದೇವಾಲಯದಲ್ಲಿ ಸಂತ ತುಕಾರಾಮನನ್ನು ಕಂಡಾಗ ಬಹನಾ ಅವಳ ಪತಿ ಸಂತಸಪಟ್ಟರು.

ದೇಹುವಿನಲ್ಲಿ ಅವರು ಯಾತ್ರಾರ್ಥಿಗಳ ಜತೆ ಮನೆಯಲ್ಲಿ ತಂಗಿದರು. ತುಕಾರಾಮರ ಹರಿ ಕೀರ್ತನೆ ಕೇಳುತ್ತ ನೆಮ್ಮದಿಯಿಂದ ಕಾಲ ಕಳೆದರು. ಮುಂಬಾಜಿ ಎಂಬ ದುರಹಂಕಾರಿಗೆ ಸಂತ ತುಕಾರಾಮರ ಕೀರ್ತಿ, ಜನಪ್ರಿಯತೆ ಸಹಿಸಲಾಗದೆ ದ್ವೇಷದಿಂದ ಗಂಗಾಧರನಿಗೆ ಈ ಶೂದ್ರನನು ನೀನು ಬ್ರಾಹ್ಮಣರು ಹೇಗೆ ಗುರುವೆಂದು ಸ್ವೀಕರಿಸಿದಿರಿ? ನಿಮಗೆ ಬಹಿಷ್ಕಾರ ಹಾಕುತ್ತೇವೆ ಎಂದು ಅಪಮಾನಿಸಿದಾಗ ಬಹನಾ 'ಭಗವಂತನ ಪರೀಕ್ಷೆಗಳು ಹೀಗೆ ತೊಂದರೆಗಳಿಗೆ ಈಡು ಮಾಡುತ್ತವೆ' ಎಂದಳು. ಮಾಬಾಜಿಯು ಗಂಗಾಧರ, ಬಹನಾ ಮತ್ತು ತುಕರಾಂರ ವಿರುದ್ಧ ಪೂನಾದ ಅಪ್ಪಾಜಿಸ್ವಾಮಿಗೆ ಪತ್ರ ಬರೆದು ಶಿಕ್ಷೆ ವಿಧಿಸಲು ದೂರಿದ. ಅಪ್ಪಾಜಿಸ್ವಾಮಿ ಅವರನ್ನು ಊರು ಬಿಟ್ಟು ಹೋಗಲು ತಿಳಿಸಿದನು. ಅವರ ಬಳಿ ಇದ್ದ ಹಸುವನ್ನು ಅಪಹರಿಸಿ ಅದಕ್ಕೆ ಮೇವು, ನೀರು ಕೊಡದೆ ಹೊಡೆದನು. ಹಸುವಿಗೆ ಹೊಡೆದಾಗ ಉಂಟಾದ ಬೊಬ್ಬೆಗಳು ತುಕಾರಾಮನ ಮೈಮೇಲೆ ಕಾಣಿಸಿಕೊಂಡಿತು. ಮುಂಬಾಜಿಯ ಮನೆಯಲ್ಲಿ ಜ್ವಾಲೆ ಎದ್ದಾಗ ಜನ ಹಸುವನ್ನು ರಕ್ಷಿಸಿದರು. ಅದರ ಮೇಲಿನ ಹೊಡೆತದ ಗುರುತುಗಳು ತುಕಾರಾಮನ ಮೈಮೇಲೆ ಕಂಡು ಪಾಂಡುರಂಗನೇ ತುಕಾರಾಮನೆಂದು ಅರಿತರು.

ಬಹನಾಳಿಗೆ ಹೆಣ್ಣುಮಗು ಜನಿಸಿತು, ಆ ಕರುವೇ ತನ್ನ ಮಗಳಾಗಿ ಹುಟ್ಟಿದೆ ಎಂದು ಭಾವಿಸಿ ಸಂತಸಪಟ್ಟಳು. ಆಕೆಯೆ ಗಂಡ ವೇದಾಂತಿಯಾಗಿದ್ದರೂ ನೈಜ ಭಕ್ತಿ ಇರಲಿಲ್ಲ. ಬಹನಾಳಿಗೆ ವೈರಾಗ್ಯ ಹೊಂದದೆ ಆಧ್ಯಾತ್ಮಿಕ ಬದುಕು ಅಸಾಧ್ಯ ಎಂದು ನೊಂದು ಸಾಯಲು ವಿಫಲಳಾಗಿ ದೇವರ ಧ್ಯಾನ ಮಾಡಲು ಯತ್ನಿಸಿದಳು. ಗಂಡನಿಂದ ಅದೂ ಆಗುತ್ತಿರಲಿಲ್ಲ. ಕಡೆಗೆ ಆತ ಹೊರ ಊರಿಗೆ ಹೋದಾಗ ನಾಲ್ಕು ಗಂಟೆಗಳ ನಿರಂತರ ಧ್ಯಾನ ಮಾಡಿದಾಗ ಆಕೆಗೆ ತುಕಾರಾಂ ಕಾವ್ಯ ಸೃಷ್ಟಿ ಶಕ್ತಿ ನೀಡಿ ದಂತಾಗಿತ್ತು. ಸಂತನ ಸ್ಪರ್ಶಾನುಭವವಾಗಿ ಭಗವಂತನ ಇರುವಿಕೆ ಅನುಭವಿಸಿದಳು. ನದಿಯಲ್ಲಿ ಮಿಂದು ಬಂದವಳು ವಿಠೋಬ ನನ್ನು ಪೂಜಿಸಿ ಕುಳಿತಾಗ ಕಾವ್ಯ ರಚನಾಸ್ಫೂರ್ತಿಯಾಗಿ ಐದು ಪದ್ಯಗಳನ್ನು ರಚಿಸಿ ಆ ದೈವಕ್ಕೆ ಅರ್ಪಿಸಿದಳು.

ನಂತರ ದೇಹುವನ್ನು ಬಿಟ್ಟು ಬಂದ ಅವರ ಕುಟುಂಬ ಶಿವೂರಿನಲ್ಲಿ ನೆಲೆಸಿತು. ಆಗ ಮೌನವ್ರತ ಆಚರಿಸಿ ಆಧ್ಯಾತ್ಮಿಕ ವಾಗಿ ಮುಳುಗಿಹೋದಳು. ಗಂಡ, ತಂದೆ ತಾಯಿಗಳು ಮರಣಾ ನಂತರ ೧೬೪೯ರಲ್ಲಿ ಗುರುವಿನ ಅಗಲಿಕೆಯಿಂದ ಮರಳಿ ದೇಹುಗೆ ಬಂದು ಹದಿನೆಂಟು ದಿನ ಉಪವಾಸ ಮಾಡಿದಾಗ ತುಕಾರಾಂ ಕಾಣಿಸಿಕೊಂಡು ಅವಳಿಗೆ ಅಶೀರ್ವದಿಸಿದರು. ನಂತರ ಬಹನಾ ಸಂತ ರಾಮದಾಸರಲ್ಲಿ ತನ್ನ ಗುರುವನ್ನು ಕಂಡು ಭಕ್ತಿ ಗೌರವ ಅರ್ಪಿಸಿದಳು. ರಾಮದಾಸರು ೧೬೮೧ರಲ್ಲಿ ತೀರಿಕೊಂಡಾಗ ಆಕೆ ಶಿವೂರಿಗೆ ಮರಳಿದಳು.





ಎಪ್ಪತ್ತು ವರ್ಷದ ಬಹನಾಳಿಗೆ ಸಾವು ಸಮೀಪಿಸುತ್ತಿರುವ ಅರಿವಾಗಿತ್ತು. ಸೊಸೆ ರುಕ್ಮಿಣಿಯ ಸಾವಿನಿಂದ, ಮಗನು ಅಂತ್ಯಕ್ರಿಯೆ ಮಾಡಲು ನದೀತೀರಕ್ಕೆ ಹೋದಾಗ ಅವಳ ಗಂಡನಿಂದ ಪತ್ರ ತಲುಪಿ ಶೀಘ್ರದಲ್ಲಿ ಬರಲು ಹೇಳಿದಂತೆ, ಐದು ದಿನಗಳಲ್ಲಿ ತಾನು ಬರುತ್ತೇನೆಂದು ಪತ್ರ ಬರೆದಳು. ಮಗನು ತಾಯಿಯ ಆಸೆಯಂತೆ ಗೋದಾವರಿ ನದಿ ದಡದಲ್ಲಿ ಅವಳ ಸಮಾಧಿಗೆ ಸ್ಥಳ ಆರಿಸಿದ್ದನು. ಆಗ ಬಹನಾ ಮಗನಿಗೆ ಹಿಂದಿನ ಹನ್ನೆರಡು ಜನ್ಮಗಳಲ್ಲು ನಾವಿಬ್ಬರೂ ಜತೆಯಾಗಿ ಬಂದಿದ್ದು ಈಗ ಹದಿಮೂರನೇ ಜನ್ಮ ಇದು ಕೊನೆಯ ಜನ್ಮವಾದ್ದರಿಂದ ಎಲ್ಲ ಬಯಕೆಗಳೂ ಸ್ತಬ್ಧವಾಗಿ ಬಿಟ್ಟಿವೆ ಎಂದಾಗ ಮಗ ಎಂದೂ ಸುಳ್ಳಾಡದ ತಾಯಿಯ ಮಾತು ಕೇಳಿ ಆತನು ವಿವರ ಕೇಳಲು ಎಲ್ಲ ಜನ್ಮಗಳ ವೃತ್ತಾಂತವನ್ನು ಹೇಳಿ ತನ್ನ ಸಾವು ಸಮೀಪಿಸಿದೆ ಎಂದೂ ಬ್ರಾಹ್ಮಣರನ್ನು ಕರೆಸಿ ವೇದ ಮಂತ್ರ ಪಠಿಸಲು ಏರ್ಪಡಿಸೆಂದು ತಿಳಿಸಿ ಎಲ್ಲ ಸೂಚನೆಗಳನ್ನು ಕೊಟ್ಟಳು. ೧೭೦೦ರಲ್ಲಿ ತನ್ನ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ನೆಮ್ಮದಿಯಿಂದ ದೇಹ ತ್ಯಜಿಸಿ ಅಮರಳಾದಳು.

ಉನ್ನತ ಶ್ರೇಣಿಯ ಕವಯಿತ್ರಿಯಾದ ಆಕೆಯೆ ಜೀವನ ಚರಿತ್ರೆ ರಚಿಸಿದಳು. ಅಭಂಗ ಛಂದಸ್ಸಿನಲ್ಲಿ ಜೀವನ, ಧರ್ಮ, ಗುರು, ಸಂತತ್ವ, ಬ್ರಾಹ್ಮಣತ್ವ, ಭಕ್ತಿ, ಆತ್ಮದರ್ಶನ ವಿಷಯಗಳು ವ್ಯಕ್ತವಾಗಿವೆ. ನೈತಿಕ, ಸಾಂಸಾರಿಕ ಬದುಕಿನ ಬಗ್ಗೆ ಉಪದೇಶ ಗಳಿವೆ. ಹೆಂಡತಿಗೆ ಗಂಡನೇ ಸರ್ವಸ್ವ, ಹೆಂಡತಿಯ ಕರ್ತವ್ಯಗಳು ಆಕೆಗೆ ಮೌಲಿಕವಾಗಿದ್ದವು.

'ಕರ್ತವ್ಯನಿಷ್ಠ ಮರ್ಯಾದಸ್ಥ ಹೆಂಡತಿ ಮನೆಯ ಕೆಲಸಗಳನ್ನು ಹಾಗೂ ಆಧ್ಯಾತ್ಮಿಕ, ಧಾರ್ಮಿಕ ಕರ್ತವ್ಯಗಳನ್ನು ಏಕಕಾಲದಲ್ಲಿ ನಿಭಾಯಿಸುತ್ತಾಳೆ. ಅಂಥ ಹೆಂಡತಿ ಸ್ವರ್ಗವನ್ನು ತನ್ನ ಅಂಗೈಯಲ್ಲಿ ಹಿಡಿದವಳಾಗಿರುತ್ತಾಳೆ' ಎಂದು ಶಾಂತ ಸ್ವಭಾವದ ದ್ವೇಷ ರಹಿತ, ವಿಧೇಯ ಪತ್ನಿ, ಲೈಂಗಿಕ ವಿಷಯ ದಲ್ಲಿ ನಿಯಂತ್ರಣ ಹೊಂದಿ, ಸಂತರ ಸೇವೆಗೆ ಸದಾ ಸಿದ್ಧಳಾಗಿ, ಗಂಡನ ಆಜ್ಞೆಗಳನ್ನು ಪ್ರಶ್ನಿಸದೆ, ಪೂರೈಸುವ ಕರ್ತವ್ಯ ನಿಷ್ಠ ಹೆಂಡತಿ ಭೌತಿಕ ಜೀವನದ ವಿಜಯ ಸಾಧಿಸಿ ಸ್ವರ್ಗದಲ್ಲಿ ತನಗಾಗಿ ಒಂದು ಸ್ಥಳವನ್ನು ಭದ್ರಪಡಿಸಿಕೊಳ್ಳುತ್ತಾಳೆ. ಎಂದು ಗಂಡನ ಆಶ್ರಯದಲ್ಲಿ ಆಧ್ಯಾತ್ಮ ಸಾಧನೆ, ಬದುಕಿನ ಪರಮಾಧಿಕ ಎಂದು ಭಾವಿಸಿ, ಆಚರಿಸಿದ ಆದರ್ಶ ಈ ಅನುಭಾವಿ ಸಂತಳದಾಗಿದೆ. ಸಚ್ಚಾರಿತ್ರ್ಯ, ವೇದಾಂತ ತತ್ವದ ಬೆಳಕಿನಲ್ಲಿ ಮನುಷ್ಯ ಜೀವನದ ಅರ್ಥ, ಸಾರ್ಥಕ ಎಂದು ಸಂದೇಶ ಎತ್ತಿದ್ದಾಳೆ. ಗೃಹಿಣಿಯಾಗಿಯೂ ಆಧ್ಯಾತ್ಮ ಸಾಧನೆ ಸಾಧ್ಯ ಎಂಬುದು ಇಲ್ಲಿ ದೃಢಪಡುತ್ತದೆ.

✤

## ಶ್ರದ್ಧಾಂಜಲಿ

ಲಿಂ. ಶ್ರೀ ಶ್ರೀ ಶಾಂತವೀರಸ್ವಾಮಿಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕುದೂರು ಹೋ. ಕಣನೂರು ಶ್ರೀ ಮಕ್ಕಳದೇವರ ಮಠದ ಅಧ್ಯಕ್ಷರಾಗಿದ್ದ ಶ್ರೀ ಶ್ರೀ **ಶಾಂತವೀರಸ್ವಾಮಿಗಳವರು** ಜುಲೈ 24ರಂದು ಲಿಂಗೈಕ್ಯರಾದರು. ಪೂಜ್ಯರಿಗೆ 90 ವರ್ಷ ವಯಸ್ಸಾಗಿತ್ತು.

ಲಿಂಗೈಕ್ಯ ಪೂಜ್ಯರು ಶ್ರೀ ಸಿದ್ಧಗಂಗಾ ಮಠದ ಸಂಸ್ಕೃತ ಮತ್ತು ವೇದ ಮಹಾಪಾಠಶಾಲೆಯಲ್ಲಿ ಸಂಸ್ಕೃತ ವಿದ್ಯಾಭ್ಯಾಸ ಮಾಡಿ ಅಲಂಕಾರ ವಿದ್ವತ್ ಶಾಸ್ತ್ರದಲ್ಲಿ ಪದವಿ ಪಡೆದಿದ್ದರು. ಕೆಲವು ವರ್ಷಗಳ ಕಾಲ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಸರಳತೆಗೆ ಪೂಜಾನಿಷ್ಠೆಗೆ, ಮಕ್ಕಳ ಮೇಲಿನ ವಾತ್ಸಲ್ಯಗಳಿಗೆ ಹೆಸರಾಗಿದ್ದ ಪೂಜ್ಯರು ಕಾಯಕ ಯೋಗಿಗಳಾಗಿದ್ದರು. ಜನತೆಯನ್ನು ಧರ್ಮ ಮಾರ್ಗದಲ್ಲಿ ನಡೆಸಲು ತುಂಬಾ ಶ್ರಮಿಸುತ್ತಿದ್ದರು. ತಮಗೆ ವಯಸ್ಸಾದುದನ್ನು ತಿಳಿದು ಶ್ರೀಮಠದ ಸೇವಾ ಕಾರ್ಯಗಳಿಗೆ ತೊಂದರೆಯಾಗದ ರೀತಿಯಲ್ಲಿ 1987ರಲ್ಲಿ ತಮ್ಮ ಉತ್ತರಾಧಿಕಾರಿಗಳನ್ನಾಗಿ ಶ್ರೀ ಮೃತ್ಯುಂಜಯಸ್ವಾಮಿಗಳನ್ನು ನೇಮಕ ಮಾಡಿಕೊಂಡಿದ್ದರು. 1918ರಲ್ಲಿ ಜನಿಸಿದ ಪೂಜ್ಯರು 1947ರಲ್ಲಿ ಕಣನೂರು ಮಕ್ಕಳದೇವರ ಮಠದ ಪೀಠಾಧಿಪತಿಗಳಾಗಿ ನೇಮಕಗೊಂಡು 60 ವರ್ಷಗಳ ಕಾಲ ಶ್ರೀಮಠದ ಸೇವಾ ಕಾರ್ಯಗಳಲ್ಲಿ ಶ್ರಮಿಸುತ್ತಿದ್ದರು.

ಶ್ರೀ ಸಿದ್ಧಗಂಗಾ ಮಠದೊಂದಿಗೆ ಜೀವನದುದ್ದಕ್ಕೂ ನಿರಂತರ ಸಂಪರ್ಕವನ್ನಿಟ್ಟುಕೊಂಡು ಮಠಾಧಿಪತಿಗಳ ಕರ್ತವ್ಯ ವನ್ನು ಅರಿತವರಾಗಿದ್ದರು. ಕಣನೂರು ಮಕ್ಕಳದೇವರ ಮಠವನ್ನು ಸದ್ದುಗದ್ದಲವಿಲ್ಲದ ಸೇವಾಕೇಂದ್ರವಾಗಿ ಗ್ರಾಮೀಣ ಜನಾಂಗದ ಕಣ್ಣಾಗಿ, ಹೃದಯವಾಗಿ ನಿರೂಪಿಸುವಲ್ಲಿ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದರು. ಶ್ರೀಗಳವರ ಲಿಂಗಪೂಜಾನಿಷ್ಠೆ ದಾಸೋಹಂಭಾವ, ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿದ್ವತ್, ಭಕ್ತವರ್ಗದಲ್ಲಿ ವಿಶೇಷವಾದ ವಾತ್ಸಲ್ಯವನ್ನು ಇಟ್ಟುಕೊಂಡಿದ್ದ ಶ್ರೀ **ಶಾಂತವೀರಸ್ವಾಮಿಗಳವರು** ಶ್ರೀ ಸಿದ್ಧಗಂಗಾ ಮಠದ ಪರಮಪೂಜ್ಯ ಶ್ರೀ ಶ್ರೀ **ಶಿವಕುಮಾರಸ್ವಾಮಿಗಳವರ** ಅಂತರಂಗದ ರತ್ನವಾಗಿ ಬಾಳನ್ನು ಬೆಳಗಿಸಿಕೊಂಡವರು.

ಶ್ರೀಗಳವರ ಲಿಂಗೈಕ್ಯ ಸ್ಥಿತಿಯಿಂದ ಭಕ್ತ ವರ್ಗಕ್ಕಾಗಿರುವ ಅಪಾರ ನೋವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಪ್ರಮಥರು ನೀಡಲೆಂದು ಆಶಿಸುತ್ತ ಲಿಂಗೈಕ್ಯರ ಆತ್ಮಕ್ಕೆ **'ಸಿದ್ಧಗಂಗಾ'** ಭಕ್ತಿ ಶ್ರದ್ಧಾಪೂರ್ವಕವಾಗಿ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಯಾರಿಗೆ ನಮಸ್ಕಾರ ಮಾಡಬಾರದು

- ಕೆ. ಪದ್ಮನಾಭ ಉಡುಪ, ನ್ಯಾಯವಾಧಿ,
ಮೊದಲನೇ ತಿರುವು, ಹೊಸಮನೆ, ಶಿವಮೊಗ್ಗ-೫೭೭ ೨೦೧.

ಆದಿಕವಿ ವಾಲ್ಮೀಕಿ, ಶ್ರೀರಾಮನ ಗುಣಗಳನ್ನು ವಿವರಿಸುವಾಗ ಹೇಳುತ್ತಾರೆ, ಶ್ರೀರಾಮ ತಾವಾಗಿಯೇ ಯಾರನ್ನು ಕಂಡರೂ ಮೊದಲೇ ಮಾತನಾಡಿಸಿ ಕ್ಷೇಮ ಸಮಾಚಾರ ಕೇಳುವವನೆಂದು. ಇನ್ನೊಬ್ಬರಿಗೆ ನಮಸ್ಕರಿಸುವುದು ಒಂದು ಸತ್‌ಸಂಪ್ರದಾಯ. ಸೈನಿಕ ತರಬೇತಿ ಪಡೆದು, ಜಿಲ್ಲಾ ಗೃಹರಕ್ಷಕದಳದ ಕಮಾಂಡೆಂಟ್ ಆಗಿ ಸೇವೆ ಸಲ್ಲಿಸಿದ ನನಗೆ ಅಸಂಖ್ಯಾತ ಸೆಲ್ಯೂಟ್ ಸ್ವೀಕರಿಸಿ ಮತ್ತು ಸೆಲ್ಯೂಟ್ ಹೊಡೆದು ಸಾಕುಸಾಕಾಗಿ ಹೋಗಿದೆ. ಇದು ಒಂದು ರೀತಿಯ ನಮಸ್ಕಾರ. ನಮಸ್ಕಾರಗಳಲ್ಲಿ ನಾನಾ ವಿಧಗಳುಂಟು. ಎರಡೂ ಕೈಜೋಡಿಸಿ ನಮಸ್ಕರಿಸುವುದು, ನಸುನಗುವುದು, ಕೈ ಎತ್ತಿ 'ಹಲೊ' ಎನ್ನುವುದು ಈಗಂತೂ 'ಹಾಯ್' ಜನಜನಿತ. ಆದರೆ ಯಾರಿಗೆ ನಮಸ್ಕಾರ ಮಾಡಬಾರದೆಂದು ಒಂದು ಸುಭಾಷಿತ ಸೂಚಿಸುತ್ತದೆ.

*ದೂರಸ್ತಮ್, ಜಲ ಮಧ್ಯಸ್ತಮ್*
*ಧಾವಂತಂ ಧನಗರ್ವಿತಂ ।*
*ಅಂಧಂ ಚೈವ ತಥೋನ್ಮತ್ತಮ್*
*ನಮಸ್ಕಾರೇಪಿ ವರ್ಜಯೇತ್ ॥*

–ಸುಭಾಷಿತರತ್ನಭಾಂಡಗಾರಂ

ತುಂಬಾ ಆತ್ಮೀಯರೋ, ಯಾರೋ ಮಹಾನುಭಾವರೋ, ದೂರದಲ್ಲಿರುವಾಗ ನಮಸ್ಕಾರ ಮಾಡಬೇಕೆನಿಸಿದರೂ ಮಾಡಬಾರದು. ಕಾರಣ ಅವರಿಗೆ ನಾವು ನಮಸ್ಕರಿಸುವುದು ಕಾಣದೇ, ಪ್ರತಿಯಾಗಿ ಅವರಿಂದ ಗುರುತಿಸಲ್ಪಡದೇ ಹೋಗಬಹುದು ಆದುದರಿಂದ ದೂರದಲ್ಲಿರುವವರಿಗೆ ನಮಸ್ಕರಿಸಬೇಡಿ.

'ಜಲ ಮಧ್ಯಸ್ತಂ' ನೀರಿನ ನಡುವಿನಲ್ಲಿ ಒಬ್ಬರು ಈಜುತ್ತಿರಬಹುದು. ಅವರಿಗೆ ನಮಸ್ಕರಿಸಲು ಹೋದರೆ ಅವರು ಕೈಎತ್ತಿ ನಮಸ್ಕರಿಸಬಹುದು. ಆಯತಪ್ಪಿ ಮುಳುಗಬಹುದು. ನೀರಿನಲ್ಲಿರುವವರಿಗೆ ಆದುದರಿಂದ ನಮಸ್ಕರಿಸಲು ಹೋಗಬೇಡಿ. 'ಧಾವಂತಂ' ಒಬ್ಬರು ಓಡುತ್ತಿರುತ್ತಾರೆ. ಕಾರಣ ಏನೇ ಇರಬಹುದು. ಅವರಿಗೆ ನಮಸ್ಕರಿಸಿದರೆ ಪ್ರತಿಯಾಗಿ ನಮಸ್ಕರಿಸುವಾಗ, ಗತಿ ತಪ್ಪಿ ಎಡವಿ ಬೀಳಬಹುದು. ಓಡುತ್ತಿರುವವರಿಗೆ ನಮಸ್ಕರಿಸಬೇಡಿ.

ಧನಗರ್ವಿತಂ –ಸಿರಿತನದ ಸೊಕ್ಕಿನಿಂದ ಉಬ್ಬಿ ಹೋಗಿರುವನಿಗೆ ಖಂಡಿತ ನಮಸ್ಕರಿಸಬೇಡಿ. 'ಸಂಪದ್ ರೋಗೋಯಂ' ಅದ್ಭುತೇ ಲೋಕೇ ಎನ್ನುವುದು ಸುಭಾಷಿತ. ಧನದ ಮದದಿಂದ ಸೊಕ್ಕಿರುವವರನ್ನು ಮಾತನಾಡಿಸಬೇಡಿ. ಅಹಂಕಾರಕ್ಕೆ ಉದಾಸೀನತ್ವವೇ ಮದ್ದಂತೆ. ಸಂಪತ್ತಿನ ರೋಗ ಲಕ್ಷಣ ಎಷ್ಟು ಸೊಗಸಾಗಿ ಹೇಳಲಾಗಿದೆ

'ಬಧಿರಯತಿ ಕರ್ಣವಿವರಂ
ವಾಡಂ ಮೂಕಯತಿ
ನಯನಂ ಅಂಧಯತಿ
ವಿಕೃತಯತಿ ಗಾತ್ರಂ
ಸಂಪದ್‌ರೋಗೋಯಂ ಅದ್ಭುತೇ ಲೋಕೇ'

ಸಂಪತ್ತಿನ ರೋಗ ಬಡಿದವನಿಗೆ, ಕಿವಿಕೇಳಿಸುತ್ತಿದ್ದರೂ ಕಿವುಡ. ಕಾರಣ, ಸಾಧಾರಣ ವ್ಯಕ್ತಿ ಯಾರಾದರೂ ಮಾತನಾಡಿಸಿದರೆ, ಕಿವಿ ಕೇಳಿದರೂ ಕಿವುಡನಂತೆ ವರ್ತಿಸುತ್ತಾನೆ. ಅಂತೆಯೇ ಮಾತನಾಡಿಸಿದರೆ, ತುಟಿ ಪಿಟಿಕೆನ್ನುವುದಿಲ್ಲ. ಸಣ್ಣವರೆಂದೆನಿಸಿದರೆ ನೋಡಿದರೂ ನೋಡದಂತೆ ಕುರುಡನಾಗಿ ಬಿಡುತ್ತಾನೆ. ಸ್ವಲ್ಪ ತಿಂದರೂ ಸೊಕ್ಕಿನಿಂದ ಮೈ ಉಬ್ಬಿಕೊಂಡಿರುತ್ತದೆಯಂತೆ. ಹೊಟ್ಟೆ ದೊಡ್ಡದಾಗಿದ್ದರೆ, ನಾವೇ ಹೇಳುವುದುಂಟು. 'It is a sign of Prosperity' ಆದುದರಿಂದ ಸಂಪತ್ ರೋಗದಿಂದ ನರಳುತ್ತಿರುವ ಶ್ರೀಮಂತನೆಂಬ ಸೊಕ್ಕಿನ ಪ್ರಾಣಿಗೆ ಖಂಡಿತ ನಮಸ್ಕರಿಸಬೇಡಿ.

ಹಾಗೆ, ದುರಾದೃಷ್ಟವಶಾತ್ ಕಣ್ಣು ಕಾಣದವರಿಗೆ, ನಮಸ್ಕರಿಸಲು ಹೋಗಿ ತೊಂದರೆ ಕೊಡಬಾರದು.

ಕೊನೆಯದಾಗಿ, ಉನ್ಮತ್ತರಿಗೆ ನಮಸ್ಕರಿಸಬೇಡಿ, ಉನ್ಮತ್ತನೆಂದರೆ ಕಂಠಮಟ್ಟ ಸುರಾಮೃತವನ್ನು ಹೀರಿ, ತೂರಾಡುತ್ತಾ, ತನ್ನೊಳಗೆ ಪ್ರಪಂಚವೋ, ಪ್ರಪಂಚದೊಳಗೆ ತಾನೋ ಎಂದು ನಡೆದು ಬರುತ್ತಿರುವ ಮಹಾನುಭಾವನಿಗೆ 'ನಮಸ್ಕಾರ ಸಾರ್' ಎನ್ನಬೇಡಿ.

ಉನ್ಮತ್ತವೆಂದರೆ ಹುಚ್ಚನೂ ಇರಬಹುದು. ಹುಚ್ಚರಿಗೆ ನಮಸ್ಕರಿಸಲು ಹೋದರೆ, ನಮ್ಮ ಕೆನ್ನೆಗೆ ಎರಡು ಬಿಗಿದರೂ ಬಿಗಿದಾನು. ✤







# ಕಾಯಿಲೆಯ ಕಥೆ

- ಮುಂದುವರೆದ ಭಾಗ

## ರೋಗವು ಬೆಳೆಯುವ ಬಗೆ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೪, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨. ದೂರವಾಣಿ : (೦೮೧೬) ೨೨೭೪೫೫೪

ಒಂದು ಮಗು ಹುಟ್ಟಿತು. ಅದರ ತೂಕ ಮೂರು ಕಿ.ಗ್ರಾಂ. ಅದು ಅಷ್ಟೇ ಇರುವುದೇನು? ನಂತರ ಬೆಳೆದು, ಯುವಕನೋ, ಯುವತಿಯೋ ಆಗುತ್ತದೆ. ಯೌವ್ವನದ ಮುಂದಿನ ಹಂತ ವೃದ್ಧಾಪ್ಯ. ಮಗುವು ಬೆಳೆಯುವಂತೆ ರೋಗವೂ ಬೆಳೆಯುತ್ತದೆ. ರೋಗದ ಬಾಲ್ಯಾವಸ್ಥೆಯನ್ನು 'ತೀವ್ರ ಕಾಯಿಲೆ' ಎಂದೂ, ಅದರ ಯೌವನವನ್ನು 'ದೀರ್ಘ ಕಾಯಿಲೆ' ಎಂದೂ, ಅದರ ಮುಪ್ಪನ್ನು 'ಮಾರಕ ಕಾಯಿಲೆ' ಎಂದೂ ಹೆಸರಿಸಲಾಗಿದೆ.

'ಕಾಯಿಲೆ ಒಂದೇ ಅಂದಿರಿ....'

ಅರ್ಥವಾಯಿತು. ಈಗಲೂ ಕಾಯಿಲೆ ಒಂದೇ ಎಂಬುದೇ ನಿರ್ಧಾರ. ಇವು ಮೂರೂ ಬೆಳವಣಿಗೆಯ ಹಂತಗಳಷ್ಟೇ. ಒಬ್ಬನೇ ವ್ಯಕ್ತಿ ಮಗು, ಯುವಕ, ಮುದುಕನಾದಂತೆ. ಈ ಮೂರನ್ನೂ ಅವಸ್ಥೆಗಳೆಂದು ಗುರುತಿಸಲಾಗುತ್ತದೆಯೇ ವಿನಃ ಬೇರೆ ಬೇರೆ ವ್ಯಕ್ತಿಗಳೆಂದಲ್ಲವಲ್ಲ. ಹಾಗೆಯೇ ರೋಗವೂ ಕೂಡ. ಸಾಮಾನ್ಯವಾಗಿ ಮನುಷ್ಯನ ಆಯಸ್ಸಿನೊಂದಿಗೆ ಈ ರೋಗಗಳ ಹಂತವನ್ನೂ ತಾಳೆ ಹಾಕಲಾಗುತ್ತದೆ. ಮಕ್ಕಳಲ್ಲಿ ತೀವ್ರ ಕಾಯಿಲೆಗಳು, ಮಧ್ಯ ವಯಸ್ಸಿನಲ್ಲಿ ದೀರ್ಘ ಕಾಯಿಲೆಗಳು, ವೃದ್ಧಾಪ್ಯದಲ್ಲಿ ಮಾರಕ ಕಾಯಿಲೆಗಳು.

ಹಿಂದೆ ತಿಳಿಸಿರುವಂತೆ ಶರಿರದ ಒಳಗೆ ಮಲಸಂಗ್ರಹಣೆಯಾದ ನಂತರ ಸಾಕಷ್ಟು ಜೀವಶಕ್ತಿಯ ಸಂಗ್ರಹವಿದ್ದಲ್ಲಿ ತನ್ನೆಲ್ಲಾ ಶಕ್ತಿಯನ್ನೂ ಒಟ್ಟುಗೂಡಿಸಿ ಶುದ್ಧೀಕರಣಾಂಗಗಳನ್ನು ಹೊರತುಪಡಿಸಿ ಅನ್ಯಮಾರ್ಗದಿಂದ ಮಲವನ್ನು ಹೊರದೂಡಲು ಪ್ರಾರಂಭಿಸುತ್ತದೆ, ಈ ಪ್ರಕಟಿತ ರೂಪವೇ ತೀವ್ರ ಕಾಯಿಲೆ. ಇದರ ರೂಪ ಕೊಂಚ ಘೋರ. ಮಕ್ಕಳ ಶರೀರದಲ್ಲಿ ಸಂಗ್ರಹಿತ ಮಲ ಕಡಿಮೆ. ಜೀವಶಕ್ತಿ ಪೂರ್ಣಪ್ರಮಾಣದಲ್ಲಿರುತ್ತದೆ. ಜೀವಶಕ್ತಿಯು ನರ–ನಾಡಿಗಳಲ್ಲಿ ಅಡೆತಡೆಗಳಿಲ್ಲದೆ ಪ್ರವಹಿಸುತ್ತಿರುತ್ತದೆ. ಅದಕ್ಕೇನಾದರೂ ಕೊಳೆಯ ಸಂಗ್ರಹದಿಂದ ತಡೆಯುಂಟಾದರೆ ಕೂಡಲೇ ಕಾರ್ಯಪ್ರವೃತ್ತವಾಗುತ್ತದೆ. ಅದರ ಫಲವೇ ತೀವ್ರ ಕಾಯಿಲೆಗಳು. ತೀವ್ರ ಕಾಯಿಲೆಗಳಿಗೆ ಉದಾಹರಣೆಗಳು. ಚಳಿ-ಜ್ವರ, ಅಪೆಂಡಿಸೈಟಿಸ್, ಕುರು, ಬ್ರಾಂಕೈಟಿಸ್, ಬೆನ್ನು ಫಣಿ, ಸೀತಾಳ ಸಿಡುಬು (Chicken Pox) ಕಾಲರಾ, ನೆಗಡಿ, ಹೊಟ್ಟೆನೋವು, ಚಿಕ್ಕಮಕ್ಕಳಲ್ಲಿ ಎಳವು, ಗದಕಟ್ಟು, ಮಂಗನಬಾವು (Mumps) ಸನ್ನಿಪಾತ, ಭೇದಿ, ಗಂಟಲಮಾರಿ (ಡಿಫ್ತೀರಿಯಾ) ಆಮಶಂಕೆ, ಮದ್ರಾಸ್–ಐ (ಕಣ್ಣು ಬೇನೆ) ಹುಳುವಿನ ಕಡಿತ ಜಾಂಡೀಸ್, ಮಲೇರಿಯಾ, ಗೋಣಿತಟ್ಟು, ಟಾನ್ಸಿಲೈಟಿಸ್, ಟೆಟಾನಸ್ ಇತ್ಯಾದಿ.

ಈ ತೀವ್ರ ಕಾಯಿಲೆಗಳನ್ನು ಔಷಧದಿಂದ ಒಳಕ್ಕೆ ತುಳಿಯುವುದು, ಜೊತೆಗೆ ಅನೈಸರ್ಗಿಕ ಜೀವನವನ್ನು ಮುಂದುವರೆಸಿದಲ್ಲಿ ಕಾಲಕ್ರಮೇಣ ಜೀವಶಕ್ತಿ ಕಡಿಮೆಯಾಗಿ ಶರೀರದ ಎಲ್ಲಾ ಭಾಗಗಳಿಗೂ ಅದು ಪೂರ್ಣಪ್ರಮಾಣದಲ್ಲಿ ಹರಿಯಲಾರದು. ಶರೀರದ ಆ ಭಾಗ ಸರಿಯಾಗಿ ಕೆಲಸವನ್ನು ನಿರ್ವಹಿಸಲಾರದು. ಅಲ್ಲಿ ಕೊಳೆಯು ನಿಲ್ಲಲು ಪ್ರಾರಂಭಿಸುವುದು.

ಉದಾಹರಣೆಗೆ, ಹಿಂದೆ ನಲ್ಲಿಯ ಪೈಪುಗಳು ಕಬ್ಬಿಣದಿಂದ ಮಾಡುತ್ತಿದ್ದರು. ದಿನೇ ದಿನೇ ಅವುಗಳು ತುಕ್ಕು ಹಿಡಿದು ವ್ಯಾಸವನ್ನು ಕಡಿಮೆ ಮಾಡಿಬಿಡುತ್ತಿದ್ದವು. ರಂಧ್ರ ಕಡಿಮೆಯಾದಂತೆ ನೀರಿಗೆ ತಡೆಯುಂಟಾಗಿ ಹೆಚ್ಚು ನೀರು ಹರಿಯುತ್ತಿರಲಿಲ್ಲ. ನಲ್ಲಿಯ ಪೈಪಿನಂತೆಯೇ ನಮ್ಮ ಶರೀರದ ನರ–ನಾಡಿಗಳು. ಇವುಗಳು ಕೊಳೆಯಿಂದ ಕಟ್ಟಿಕೊಂಡರೆ ಹರಿಯುವ ರಕ್ತದ ಪ್ರಮಾಣ ಕಡಿಮೆಯಾಗುವುದು. ಎಲ್ಲಾ ಜೀವಕೋಶಗಳಿಗೂ ಆಹಾರ ದೊರೆಯದೆ ಅವು ಸಾಯುವುವು. ಶುದ್ಧೀಕರಣಾಂಗಗಳಿಗೆ ಹೊರೆಯು ಹೆಚ್ಚಿ ಅವು ಸಮರ್ಪಕವಾಗಿ ಕೆಲಸ ಮಾಡದೆ ಕೊಳೆಯು ಹೆಚ್ಚು ಉಳಿಯುವುದು. ಕಡಿಮೆಯಾದ ಜೀವಶಕ್ತಿ ಇದನ್ನು ಪೂರ್ಣವಾಗಿ ಹೊರನೂಕಲು ಸಾಧ್ಯವಾಗದೆ ಕೊಂಚ ಕೊಂಚವೇ ಕೊಳೆಯನ್ನು ಅನ್ಯಮಾರ್ಗದಲ್ಲಿ ಹೊರದೂಡಲು ಪ್ರಾರಂಭಿಸುವುದು. ಈಗ ಹೊರದೂಡಲ್ಪಡುವ ರೂಪಕ್ಕೊಂದರಂತೆ 'ದೀರ್ಘ ಕಾಯಿಲೆ' ಎಂದು ಹೆಸರಿಸುವೆವು.

ಉದಾಹರಣೆಗೆ : ಮಲಬದ್ಧತೆ, ರಕ್ತಹೀನತೆ, ಆರ್ಟಿರಿಯೋ ಸ್ಕೋರೋಸಿಸ್, ಡಿಸ್ಪೆಪ್ಸಿಯಾ, ಎಕ್ಸಿಮಾ, ಪ್ರೊಸ್ಟೇಟ್ ಗ್ರಂಥಿಯ ಉರಿಯೂತ, ಮೂರ್ಛೆ, ಗಾಯಿಟರ್, ಕರುಳು ಹುಣ್ಣು, ಹರ್ನಿಯಾ, ನಿದ್ರಾನಾಶ, ಲುಕೇರಿಯಾ, ಬೊಜ್ಜು, ರೊಮ್ಯಾಟಿಸಂ, ವೆರಿಕೋಸ್ ವೈನ್ಸ್, ಪೈಲ್ಸ್, ಹೈ ಬ್ಲಡ್ ಪ್ರೆಶರ್, ಮಧುಮೇಹ ಇತ್ಯಾದಿ.

ಈ ರೋಗಗಳನ್ನೂ ಮತ್ತೆ ಮತ್ತೆ ಔಷಧಿಗಳಿಂದ ತುಳಿಯುತ್ತಾ ಬಂದರೆ, ಜತೆಗೆ ಅನೈಸರ್ಗಿಕ ಜೀವನದ ಮುಂದು

ವರಿಕೆಯಿಂದ, ಮುಂದಿನ ಹಂತವಾದ ಮಾರಕ ಕಾಯಿಲೆಯಾಗಿ ವರ್ಗಾಯಿಸಲ್ಪಡುವುದು. ಈ ಹಂತದಲ್ಲಿ ಜೀವಶಕ್ತಿಯ ಪ್ರಮಾಣ ಇನ್ನೂ ಕಡಿಮೆಯಾಗುವುದು.
ಉದಾಹರಣೆಗೆ : ಕ್ಷಯ, ಕ್ಯಾನ್ಸರ್, ಏಡ್ಸ್ ಇತ್ಯಾದಿ.

ದೀರ್ಘ ಮತ್ತು ಮಾರಕ ಕಾಯಿಲೆಗಳಲ್ಲಿ ಮನಸ್ಸಿನ ಪಾತ್ರವೂ ಉಂಟು. ಹೀಗೆ ರೋಗಗಳು ಬೆಳೆಯುವುವು.

ಹೊಸ ಬಟ್ಟೆಯಲ್ಲಿನ ಕೊಳೆ ಬೇಗ ಬಿಡುಗಡೆಯಾಗುತ್ತದೆ. ಬಟ್ಟೆ ಹಳೆಯದಾಗುತ್ತಾ ಕೊಳೆಯು ನಿಲ್ಲುವುದೂ ಹೆಚ್ಚು. ತುಂಬಾ ಹಳೆಯದಾದರೆ ಬಟ್ಟೆಯ ಬಣ್ಣವೇ ಬದಲಾಗುವುದು. ಹಾಗೆಯೇ ಹೊಸ ಮನೆಯನ್ನು ಶುಚಿಗೊಳಿಸುವುದು ಸುಲಭ. ಅದು ಹಳೆಯದಾದಂತೆ ಕೊಳೆಕಟ್ಟುವುದು ಹೆಚ್ಚು. ಇದೇ ನಿಯಮವನ್ನು ನಿಸರ್ಗ, ಶರೀರಕ್ಕೂ ಅನುಸರಿಸುತ್ತದೆ. ಹೆಸರುಗಳಿಗೆ ಒದ್ದಾಡುವುದಕ್ಕಿಂತ ಮೂಲ ತತ್ವಕ್ಕೆ ಗಮನ ಹರಿಸುವುದು ಉತ್ತಮ ಮಾರ್ಗ.

ಶುದ್ಧೀಕರಣಾಂಗಗಳಿಗೆ ಹೆಚ್ಚಾದ ಕೊಳೆಯು ಶರೀರದ ನವದ್ವಾರಗಳಿಂದ ಮೊದಲು ಬರಲು ಪ್ರಾರಂಭಿಸುವುವು. ಉದಾಹರಣೆಗೆ : ಕಣ್ಣಿನಲ್ಲಿ ಗೀಜು, ಆಗಾಗ ಬರುವ ಆಕ್ಷೀ, ಇತ್ಯಾದಿ. ಇದನ್ನೆಲ್ಲಾ ರೋಗಗಳೆಂದು ನಾವು ಗಣನೆಗೆ ತೆಗೆದು ಕೊಳ್ಳುವುದಿಲ್ಲ. ಇವೆಲ್ಲಾ ಮುಂದೆ ರೋಗ ಬರುವ ಪೂರ್ವ ಚಿನ್ಹೆಗಳಷ್ಟೆ. ರೋಗಗಳನ್ನು ಹೊತ್ತು ಓಡಾಡುತ್ತಲೇ ಇರುತ್ತೇವೆ. ಆದರೆ ರೋಗಿಗಳೆಂದು ಹೆಸರಿಸಲ್ಪಟ್ಟಿರುವುದಿಲ್ಲ. ಕೊಳೆಯ ಪ್ರಮಾಣ ಇನ್ನೂ ಹೆಚ್ಚಿ, ನೋವಾಗಲಿ, ಕಣ್ಣಿಗೆ ಕಾಣುವಂತಹ ಚಿನ್ಹೆಗಳಾಗಲಿ ಕಂಡುಬಂದಾಗ ರೋಗ ಬಂದಿತೆಂದು ಔಷಧಿಗಳ ತಡಕಾಟಕ್ಕೆ ಪ್ರಾರಂಭಿಸಿ, ಆ ಔಷಧವೆಂಬ ಕೊಳೆಯನ್ನೂ ಸಹ ಶರೀರಕ್ಕೆ ಸೇರಿಸುತ್ತೇವೆ.

'The absence of symptom is not the same as good health. Typical cold symptoms that people attempt to supress with drugs are nothing more than attempts of the body to restore homeostatis and re- move the disease itself. By drugging away their symp- toms people keep themselves sick for long and can overturn a minor disease into a major one' - 'ರೋಗದ ಲಕ್ಷಣವಿಲ್ಲದಿರುವಿಕೆಯೇ ಉತ್ತಮ ಆರೋಗ್ಯವೆಂದಲ್ಲ. ಜನರು ಸಾಂಕೇತಿಕವಾಗಿ ಬಂದ ಯಾವ ನೆಗಡಿಯನ್ನು ಔಷಧಿಗಳಿಂದ ತುಳಿಯಲು ಪ್ರಯತ್ನಿಸುತ್ತಿದ್ದಾರೆಯೋ ಅದು ಶರೀರವನ್ನು ತನ್ನ ಸಹಜ ಸ್ಥಿತಿಗೆ ರೋಗದಿಂದ ಮುಕ್ತಮಾಡಿ ತರುವುದೇ ಆಗಿದೆ. ಆ ಚಿನ್ಹೆಯನ್ನೇ ಔಷಧಿಯಿಂದ ತುಳಿದು ಚಿಕ್ಕ ಕಾಯಿಲೆಯನ್ನು ದೊಡ್ಡದು ಮಾಡಿಕೊಂಡು ಸದಾ ಕಾಯಿಲೆ ಯಲ್ಲಿಯೇ ನರಳುತ್ತಾರೆ.'– Micro Biologist and Noble Laurate, Joshua Lederburg.

**ಕೆಲವು ಪ್ರಶ್ನೆಗಳು :**

ಪ್ರಶ್ನೆ : ವಯಸ್ಕರಲ್ಲಿ ತೀವ್ರರೋಗಗಳು ಬರುವುದೇ ಇಲ್ಲವೇ?

ಬರಬಹುದು. ಆದರೆ ಅದರ ಹಿನ್ನಲೆಯಲ್ಲಿ ದೀರ್ಘ ರೋಗವು ಇದ್ದೇ ಇರುತ್ತದೆ. ತೀವ್ರರೋಗ ವಾಸಿಯಾದ ನಂತರ ಮತ್ತೆ ದೀರ್ಘರೋಗವು ಮುಂದುವರೆಯುತ್ತದೆ. ತಾವು ಕೇಳಿರ ಬಹುದು ಎಷ್ಟೋ ಜನ ದೊಡ್ಡವರು, 'ನನಗೆ ಜ್ವರ ಬಂದು ಎಷ್ಟೋ ವರ್ಷವಾಯ್ತು ಈ ಹಾಳು ಬಿ.ಪಿ. ಬಿಟ್ಟರೆ ಬೇರೆ ಯಾವ ಕಾಯಿಲೆಯೂಇಲ್ಲ.' ಇವೆಲ್ಲ, ಅವರಿಗೆ ತೀವ್ರ ಕಾಯಿಲೆ ಬರದಷ್ಟು ಜೀವಶಕ್ತಿ ಕಡಿಮೆಯಾಗಿರುವ ಸ್ಥಿತಿಯಲ್ಲದೆ ಬೇರಲ್ಲ.

ಪ್ರಶ್ನೆ : ಮಕ್ಕಳಲ್ಲಿ ದೀರ್ಘಕಾಯಿಲೆ ಬರುವುದಿಲ್ಲವೇ ?

ಸಾಮಾನ್ಯವಾಗಿ ಬರಕೂಡದು. ಆದರೆ, ಈಗ ಅವಕ್ಕೂ ಬರಲು ಪ್ರಾರಂಭವಾಗಿದೆ. ತಾಯಿಯು ಗರ್ಭಧರಿಸುವ ಸನ್ನಿವೇಶದಲ್ಲಿ ಹೆಣಗುತ್ತಿರುವ ದೀರ್ಘಕಾಯಿಲೆಗಳೇ ಇದಕ್ಕೆ ಕಾರಣ. ಇಂದು ಇದು ಹೆಚ್ಚುತ್ತಿರುವುದರಿಂದ ಮಕ್ಕಳಲ್ಲಿಯೂ ದೀರ್ಘಕಾಯಿಲೆಗಳು ಪ್ರಾರಂಭವಾಗಿವೆ.

ಪ್ರಶ್ನೆ : ಈ ತೀವ್ರಕಾಯಿಲೆ ಬಂದಾಗ ಏನು ಮಾಡುವುದು?

ಅದಕ್ಕಾಗಿ ಮುಂದಿನ ಭಾಗಗಳು. ಈ ಭಾಗದಲ್ಲಿ ಕಾಯಿಲೆಗೆ ಕಾರಣ ಹಾಗೂ ಅವುಗಳು ಬೆಳೆಯುವ ಬಗೆ ಇಷ್ಟನ್ನು ತಿಳಿಸುವುದಷ್ಟೇ ನಮ್ಮ ಉದ್ದೇಶ.

*ಶರೀರದಲ್ಲಿನ ಜೀವಶಕ್ತಿಯ ಕಳಕಳಿ, 'ತೀವ್ರಕಾಯಿಲೆ'*
*ಎಂದು ತಿಳಿ ಅದನು ಔಷಧದಿಂದ ತುಳಿ*
*ಪಡೆ 'ದೀರ್ಘಕಾಯಿಲೆ'ಯೆಂಬ ಬಳುವಳಿ*
*ಅನೈಸರ್ಗಿಕ ಜೀವನದಿಂದ ಅಗುವುದದು 'ಮಾರಕ'*
*ಜೀವಕ್ಕದು ಹಾನಿಕಾರಕ ಇದು ಮನುಜನು ತಾನೇ*
*ರೋಗವನು ಬೆಳೆಸಿಕೊಳ್ಳುವ ತರಹ*
*ಇದನು ಕರೆದುಕೊಳ್ಳುವನು ತನ್ನ ಹಣೆಯ ಬರಹ*
*ಹಣೆಯ ಬರಹವನು ಬರೆಯುವನಂತೆ ಬ್ರಹ್ಮ!*
*ಅಲ್ಲವೋ, ನೀನೇ ಬರೆದುಕೊಂಡುದೋ ಅದು, ತಮ್ಮ*

## ರೋಗ ನಮ್ಮ ಮಿತ್ರ :

ರೋಗದ ಭಯವೇಕೆ? – ರೋಗದ ಬಗ್ಗೆ ಭಯವಿಲ್ಲ ದಿರುತ್ತದೆಯೇ? ಏನೋ ಹೋಗಲಿ ಎಂದು ಪುಸ್ತಕವನ್ನು ಕೊಂಡುಕೊಂಡೆವು, 'ರೋಗ– ಆರೋಗ್ಯಕ್ಕಾಗಿ ಹೋರಾಟ' –ನೊಬೆಲ್ ಪಾರಿತೋಷಕ ವಿಜೇತ ಅಲೆಕ್ಸಿ ಕೆರೆಲ್ ಹೇಳಿದರೆಂದು ಒಪ್ಪಿಕೊಂಡೆವು. 'ರೋಗ–ನಮ್ಮ ಶರೀರದ ಭಾಷೆ' –ವೈದ್ಯರ ವೈದ್ಯ ಡಾ॥ ಬಿ.ಎಂ. ಹೆಗ್ಡೆಯವರು ಹೇಳಿದರೆಂದು ನಂಬಿದೆವು. ಕಡೆಗೆ, 'ರೋಗ, ನಮ್ಮ ಮಿತ್ರ'– ಎಂದರೆ, ಸಾಕು ನಿಮ್ಮ ಸಹವಾಸ, ಬರಲೇಬಾರದು ನಿಮ್ಮ ಹತ್ರ – ಅಂದುಕೊಂಡೆವು.

ಅಲ್ರೀ, ರೋಗವನ್ನು ಮಿತ್ರನೆಂದರೆ ಯಾರಾದರೂ





ನಂಬುತ್ತಾರೇನ್ರೀ? ಏಕ್ರೀ, ಬೊಗಳೆ ಬಿಡ್ತೀರಿ.'

ಮಿತ್ರನೆಂದರೆ ಯಾರು? ನಮ್ಮ ಕಷ್ಟಕಾಲದಲ್ಲಿ ಸಹಾಯ ಮಾಡುವವನು.

'ಕಾಯಿಲೆ ಎನ್ನುವುದು ಕಷ್ಟವನ್ನು ತಂದೊಡ್ಡುವುದು. ಅದು ಹೇಗೆ ಸಹಾಯ ಮಾಡುತ್ತದೆ?' ನಾವು ತಿಳಿದಿರುವುದು ಆ ರೀತಿ. ಅದರಿಂದಲೇ ಇಂದಿನ ಎಲ್ಲಾ ಕಷ್ಟಗಳು.

'ಶತ್ರು ಮತ್ತು ರೋಗ–ಚಿಕ್ಕವನೆಂದು ಬಿಡಬೇಡ, ಚಿವುಟಿಹಾಕು'– ಎಂಬ ಉಕ್ತಿ ಸಂಸ್ಕೃತದಲ್ಲಿ ಉಂಟಲ್ಲ ಅದು ಸುಳ್ಳೆ?

ಅವರು ಹೇಳಿರುವ ಅರ್ಥವೇ ಬೇರೆ, ನಾವು ಅರ್ಥ ಮಾಡಿಕೊಂಡಿರುವುದೇ ಬೇರೆ. ರೋಗ ಮತ್ತು ಶತ್ರು ಇಬ್ಬರನ್ನೂ ಬೆಳೆಯಲು ಬಿಡಬೇಡ, ಚಿಕ್ಕವುಗಳಾಗಿದ್ದಾಗಲೇ ಅದರಿಂದ ಬಿಡುಗಡೆ ಹೊಂದು ಎಂದು. ರೋಗವೇ ಶತ್ರುವೆಂದಲ್ಲ.

'ಅದೇ ತಾನೆ ಗರ್ಭಧರಿಸಿರುವ ಮಹಿಳೆಗೆ ಪದೇ ಪದೇ ವಾಂತಿಯಾಗುತ್ತದೆ. ಈ ಕ್ರಿಯೆಯೇ ಮಹಿಳೆಗೂ ಭ್ರೂಣಕ್ಕೂ ಅತ್ಯುತ್ತಮವೆಂದು ಮಾನವದೇಹ ಹಿಂದೆಂದೋ ನಿರ್ಧರಿಸಿದೆ. ಏಕೆಂದರೆ, ಗರ್ಭವತಿ ಸೇವಿಸುವ ಆಹಾರದಲ್ಲಿ ಏನಾದರೂ ವಿಷವಸ್ತುಗಳಿದ್ದರೆ ಭ್ರೂಣದ ಮೇಲೆ ಅದರ ಪರಿಣಾಮ ಬೀರಕೂಡದೆಂದು ಹಾರ್ಮೋನ್ ಸ್ರಾವ ಹೆಚ್ಚಾಗುತ್ತದೆ. ಭ್ರೂಣದ ಅಂಗಾಂಗ ಚಿಗುರುವ ಮೊದಲ ಮೂರು ತಿಂಗಳ ಅವಧಿ ಯಲ್ಲಿ ಪದೇ ಪದೇ ವಾಂತಿಯಾಗುವುದು ಆರೋಗ್ಯದ ಲಕ್ಷಣ.

ಅದೇ ರೀತಿ, ಸೋಂಕು ರೋಗ ತಗುಲಿದ ಕೆಲವರ ದೇಹದಲ್ಲಿ ಕಬ್ಬಿಣದ ಅಂಶ ತುಂಬಾ ಕಡಿಮೆ ಮಟ್ಟಕ್ಕೆ ಬರುತ್ತದೆ. ವೈದ್ಯರು ಗಾಬರಿಬಿದ್ದು ಐರನ್ ಟಾನಿಕ್, ಮಾತ್ರೆ ಸೇವಿಸಲು ಹೇಳುತ್ತಾರೆ. ಆದರೆ, ದೇಹಕ್ಕೆ ಸೇರಿಕೊಂಡ ರೋಗಾಣುಗಳನ್ನು ಸಾಯಿಸಲೆಂದು ಮಾನವ ಶರೀರ ಬೇಕೆಂತಲೇ ಯಕೃತ್ತಿನಲ್ಲಿ ಕಬ್ಬಿಣದ ಮಟ್ಟವನ್ನು ತಗ್ಗಿಸುತ್ತದೆ.

ದೇಹಕ್ಕೆ ತನ್ನನ್ನು ತಾನೇ ರಕ್ಷಿಸಿಕೊಳ್ಳುವ ಅನೇಕ ಉಪಾಯಗಳು ಗೊತ್ತಿವೆ. ಸಹಸ್ರಾರು ತಲೆಮಾರುಗಳಿಂದ ತನಗೆ ತಾನೇ ಚಿಕಿತ್ಸೆ, ಉಪಚಾರ ಮಾಡಿಕೊಳ್ಳುತ್ತಾ ಬಂದಿದೆ'– 'ಡಾರ್ವಿನಿಯನ್ ವೈದ್ಯಕೀಯದ ಅರುಣೋದಯ' ಎಂಬ ಲೇಖನದಿಂದ.

'ದೇಹದ ಉಷ್ಣ ಹೆಚ್ಚುವುದು ರೋಗದ ಲಕ್ಷಣವಾದರೂ ಅದು ನಮಗೆ ಒಳಿತನ್ನೇ ಮಾಡುತ್ತದೆ. ದೇಹಕ್ಕೂ, ರೋಗಾಣು ವಿಗೂ ಆಗುವ ಯುದ್ಧದಲ್ಲಿ ದೇಹದ ಉಷ್ಣತೆ ಹೆಚ್ಚಿರುವುದು ರೋಗಾಣುವಿಗೇ ಮಾರಕ'– ಡಾ॥ ಬಿ.ಎಮ್. ಹೆಗ್ಡೆ.

ಈಗ ಆಧುನಿಕ ವೈದ್ಯವಿಜ್ಞಾನ, 'Fever is a friend, it fights disease' ಎಂಬ ತೀರ್ಮಾನಕ್ಕೆ ಬಂದಿದೆ. Give me fever, I will cure all diseases'. ಎಂಬ ಮಾತನ್ನು ಬಹಳ ಹಿಂದೆಯೇ ಹಿಪ್ಪೊಕ್ರೆಟಿಸ್ ಹೇಳಿದ್ದಾನೆ.

'Every acute disease is the result of a cleaning and healing effort of Nature' - 'ಎಲ್ಲಾ ತೀವ್ರ ಕಾಯಿಲೆಗಳಿಗೂ ಸಹ ಶರೀರವನ್ನು ಶುದ್ಧಿಮಾಡುವ ಮುಂದೆ ಯಾವ ಕಾಯಿಲೆಗಳೂ ಬರದಂತೆ ತಡೆಯುವ ನಿಸರ್ಗದ ಪ್ರಯತ್ನವೇ ಆಗಿದೆ.' Dr. Lindlahr.

'Baby's body was not pure, so Nature tried to purify it'

'What?! you exclaim, A diarrhoea, a process of purification?!' We answer - yes. Just the organism defends itself against salt or calomel, when taken internally by means of a diaarrhoea, so it also purifies itself of other inimical substances by the same means. The excessive formation of mucus in a cold is accomplished by the same power and functions that produces the normal secretion. Inflammation has been recognised as a beneficial process by the medical profession since the days of Bier. Hygienists had considered it as such, long before Bier.' - 'ಮಗುವಿನ ಶರೀರ ಶುದ್ಧವಾಗಿರಲಿಲ್ಲ. ನಿಸರ್ಗವು ಅದನ್ನು ಶುದ್ಧೀಕರಿಸಲು ಪ್ರಯತ್ನಿಸಿತು. ಏನು! ಅತಿಸಾರವು ಶುದ್ಧೀಕರಣದ ಪ್ರಯತ್ನವೇ? ನಾವು ಅದಕ್ಕೆ ಕೊಡುವ ಉತ್ತರ, ಹೌದು. ಶರೀರಕ್ಕೆ ಭೇದಿಯ ಉಪ್ಪನ್ನು ಕೊಟ್ಟರೆ ಹೇಗೆ ಅದನ್ನು ಹೊರಕ್ಕೆ ಹಾಕಲು ಪ್ರಯತ್ನಿಸುತ್ತದೆಯೋ ಹಾಗೆಯೇ ಯಾವುದೇ ತೊಂದರೆಯುಂಟುಮಾಡುವ ವಸ್ತು ಸೇರಿದ್ದರೂ ಅಥವಾ ಅದರ ಒಳಗೇ ಉತ್ಪತ್ತಿಯಾಗಿ ಉಳಿದರೂ ಅದೇ ರೀತಿಯಲ್ಲಿಯೇ ಹೊರಕ್ಕೆ ಹಾಕುತ್ತದೆ. ನಮ್ಮ ಶರೀರದ ಯಾವ ಶಕ್ತಿಯು ಆರೋಗ್ಯದಲ್ಲಿ ಕೆಲಸ ಮಾಡುತ್ತದೆಯೋ ಅದೇ ಶಕ್ತಿಯು ನೆಗಡಿಯಲ್ಲಿ ಹೆಚ್ಚು ಲೋಳೆಯಾ ರೂಪದಲ್ಲಿ ಮೂಗಿನಿಂದ ಸುರಿಯುವಂತೆ ಮಾಡುತ್ತದೆ. ಬೇರ್‌ನ ಕಾಲದಿಂದಲೂ ವೈದ್ಯಕೀಯವು ಉರಿಊತವು ಶರೀರದ ಉಪಯೋಗಕ್ಕಾಗಿಯೇ ಬಂದಿದೆ ಎಂದು ತಿಳಿದಿತ್ತು'– Dr. Herbert M.Shelton.

'Many people are unaware that symptoms such as a runny nose or fever are the treatments the body has prescribed to remedy the condition. Increased mucus production is the body's means of washing away infected cells and virus particles from the body. Fever aids in the body's immune defences, activating the white blood cells and inducing an interferan secretion from the brain. Interferan is a powerful substance that stirs the fighting arm of the immune system into action' - ' ಮೂಗಿನಲ್ಲಿ ಸುರಿಯುತ್ತಿರುವ ನೆಗಡಿಯಾಗಲಿ, ಜ್ವರವೇ ಆಗಲೀ ಶರೀರವು ತನ್ನ ಸ್ಥಿತಿಯನ್ನು

ಸುಧಾರಿಸಿಕೊಳ್ಳಲು ನೀಡುತ್ತಿರುವ ಔಷಧಿ ಎಂಬ ಸತ್ಯವನ್ನು ಬಹಳ ಜನ ಅರಿತಿಲ್ಲ. ರೋಗಗ್ರಸ್ತವಾದ ಜೀವಕೋಶಗಳು ಮತ್ತು ಸತ್ತ ಮಿಣಿ ಜೀವಿಗಳು ಸೇರಿ ಆದುದೇ ಶ್ಲೇಷ್ಮ. ಅವುಗಳನ್ನು ಹೊರಕ್ಕೆ ಹಾಕುತ್ತಿರುವುದೇ ನೆಗಡಿ. ಜ್ವರವೆನ್ನುವುದು ಶರೀರದ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸಲೆಂದೇ ಬಂದಿದೆ. ಅದು ಬಿಳಿಯ ರಕ್ತಕಣಗಳ ಶಕ್ತಿಯನ್ನು ಹೆಚ್ಚಿಸಿ ಮೆದುಳಿನಲ್ಲಿನ ಇಂಟರ್‌ಫೆರಾನ್ ದ್ವಿಗುಣಗೊಳಿಸುತ್ತದೆ. ಈ ಇಂಟರ್‌ಫೆರಾನ್ ಶರೀರದ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತದೆ. – Fasting and Eating - Dr. Joel Fuhrman M.D.

ರೋಗ–ಶರಿರದ ಹೋರಾಟ, ಶರೀರದಾ ಭಾಷೆ, ಪ್ರಕೃತಿ ತಿದ್ದುವ ಮಾರ್ಗ. ಶರೀರ ತನ್ನನ್ನು ತಾನೇ ರಿಪೇರಿ ಮಾಡಿಕೊಳ್ಳುವ ರೀತಿ, ಪ್ರಕೃತಿ ಶುಚಿಮಾಡುವ ಪ್ರಕ್ರಿಯೆ– ಇವುಗಳೆಲ್ಲದರ ಅರ್ಥವೇನು? ರೋಗ ನಮಗೆ ತೊಂದರೆ ಕೊಡಲು ಬಂದಿದೆಯೋ ಉಪಕಾರ ಮಾಡಲು ಬಂದಿದೆಯೋ? ಹೆಚ್ಚಿದ ಕೊಳೆಯು ಒಳಗೇ ಉಳಿದಿದ್ದರೆ ಏನಾಗುತ್ತಿತ್ತು? ಕೂಡಲೇ ಸಾವು ಬರುತ್ತಿತ್ತು. ಶರೀರದ ಕ್ರಿಯೆಯಲ್ಲಿ ಕೊಳೆಯ ಉತ್ಪತ್ತಿ ಅದನ್ನು ಹೊರಕ್ಕೆ ಕಳುಹಿಸುವ ಏರ್ಪಾಡು ಸಹ ಅದರಲ್ಲಿಯೇ ಇದೆ. ಅದು ಸರಿಯಾಗಿ ಕೆಲಸ ಮಾಡದಾಗ ಅಥವಾ ಕೊಳೆಯ ಸಂಗ್ರಹ ಹೆಚ್ಚಿದಾಗ ಒಂದು ತುರ್ತು ಪರಿಸ್ಥಿತಿಯ ವ್ಯವಸ್ಥೆ ಇರಬೇಕಲ್ಲವೇ? – ಅದೇ ರೋಗ.

ಬಸ್ಸಿನಲ್ಲಿ ಒಂದು ಸಣ್ಣ ಬಾಗಿಲಿರುತ್ತದೆ. ಅದರ ಮೇಲೆ ಬರೆದಿರುತ್ತಾರೆ. 'Emergency Exit'. ಸಾಧಾರಣ ಸನ್ನಿವೇಶದಲ್ಲಿ ಅದನ್ನು ಮುಚ್ಚಿರುತ್ತಾರೆ. ತುರ್ತುಪರಿಸ್ಥಿತಿಯಲ್ಲಿ ಅದು ತೆರೆಯಲ್ಪಡುತ್ತದೆ. ರೋಗವೆಂದು ನಾವು ಕರೆಯುವುದು ತುರ್ತುಪರಿಸ್ಥಿತಿಯಲ್ಲಿನ ನಮ್ಮ ಶರೀರದ ಸ್ಥಿತಿ.

ಡಾ॥ ಜೆ.ಡಬ್ಲ್ಯೂ ವೀಗಲ್ಸ್‌ವರ್ಥ್ (J.W. Wigals worth) ರವರ ಪ್ರಕಾರ, ರೋಗ –ನಿಸರ್ಗದ ಸೇಫ್ಟೀ ವಾಲ್ವ್ ( safety valve) ಪ್ರೆಷರ್ ಕುಕ್ಕರಿನಲ್ಲಿ ಒತ್ತಡ ಅಪಾಯದ ಮಟ್ಟಕ್ಕೆ ಬಂದರೆ ತಕ್ಷಣ ಸೇಫ್ಟೀ ವಾಲ್ವ್ ಮೇಲಕ್ಕೆ ಎಗರಿ ಒತ್ತಡ ಕಡಿಮೆಯಾಗುವಂತೆ ಮಾಡುತ್ತದೆ. ಅದೇ ರೀತಿ ನಮ್ಮ ಶರೀರದಲ್ಲಿ ಕೊಳೆಯ ಮಟ್ಟ ಅಪಾಯದ ಮಟ್ಟಕ್ಕೆ ಬಂದರೆ ಅದು ರೋಗದ ರೂಪದಲ್ಲಿ ಹೊರಕ್ಕೆ ಹಾಕಲ್ಪಟ್ಟು ಕೊಳೆಯಿಂದ ಶರೀರವನ್ನು ಮುಕ್ತ ಮಾಡುತ್ತದೆ. ಇಲ್ಲದಿದ್ದರೆ ಶರೀರ ಸ್ಫೋಟ ವಾಗುತ್ತಿತ್ತು. ಅಂದರೆ, ತಕ್ಷಣವೇ ಸಾವು ಬರುತ್ತಿತ್ತು. ಅದನ್ನು ತಪ್ಪಿಸಲು ರೋಗ ಬಂದಿದೆ. ಹುಟ್ಟು–ಜೀವನ–ರೋಗ–ಸಾವು ಇವೆಲ್ಲವೂ ಸಹಜ ಹಾಗೂ ನೈಸರ್ಗಿಕ. ರೋಗ ಬಂದೊಡನೆಯೇ ಸಾವು ಬರಬಹುದೆಂಬುದೇ ನಮ್ಮ ಭಯ. ನಿಜವಾಗಿಯೂ ರೋಗ ಬಂದಿರುವುದು ನಮ್ಮನ್ನು ಸಾಯಿಸಲಲ್ಲ, ಸಾವನ್ನು ಮುಂದೂಡಲು.

**ಈಗ ಹೇಳಿ ರೋಗ ನಮ್ಮ ಮಿತ್ರನೋ? ಶತ್ರುವೋ?**

ಪ್ರಶ್ನೆ: ಮಿತ್ರನಾಗಿದ್ದಲ್ಲಿ ನಮಗೆ ನೋವು, ಸಂಕಟ, ಸಾವು ಎಲ್ಲವನ್ನೂ ಏಕೆ ಉಂಟುಮಾಡುತ್ತದೆ ?

ಇವೆಲ್ಲವನ್ನೂ ರೋಗವುಂಟುಮಾಡುವುದಿಲ್ಲ. ನಾವೇ ತಂದುಕೊಳ್ಳುತ್ತೇವೆ. ಅದಕ್ಕೆ ನಮ್ಮ ಅಜ್ಞಾನ, ದುರಾಸೆ, ಅತಿಲಂಪಟತೆ, ಸೋಮಾರಿತನ, ಹೀಗೆ ಅನೇಕ ಕಾರಣಗಳಿವೆಯೇ ವಿನಃ ರೋಗ ಕಾರಣವಲ್ಲ. 'ಅನಿಷ್ಟಕ್ಕೆ ಶನೇಶ್ವರ ಗುರಿ' ಎಂಬ ಗಾದೆಯಂತೆ ನಾವು ರೋಗವನ್ನು ಕಾರಣ ಮಾಡುತ್ತಿದ್ದೇವಷ್ಟೆ. ಹುಟ್ಟು–ಸಾವುಗಳ ಮಧ್ಯೆ ರೋಗವನ್ನು ನಿಸರ್ಗ ಇಡದಿದ್ದರೆ ಮನೆಗೆ ಫ್ಯೂಸ್ ಹಾಕದೆ ಎಲೆಕ್ಟ್ರಿಕ್ ವೈರಿಂಗ ಮಾಡಿದಂತಿರುತ್ತಿತ್ತು!

ಸಾವಿಗೂ ಸಹ ನಿಸರ್ಗದಲ್ಲಿ, ಒಂದು ಅರ್ಥಪೂರ್ಣವಾದ ಸ್ಥಾನ ಉಂಟು. ಇದು ಬರೀ ವೇದಾಂತದ ಅರ್ಥದಲ್ಲಲ್ಲ. ವೈಜ್ಞಾನಿಕವಾಗಿ ವಿಶ್ಲೇಷಿಸಿದರೂ ಸಹ ರೋಗ–ಸಾವುಗಳ ಹಿಂದೆ ಗುರುತ್ವಾಕರ್ಷಣ ನಿಯಮದಷ್ಟೇ ವೈಜ್ಞಾನಿಕವಾದ ನಿಯಮವಿದೆ. ವೇದಾಂತದ ದೃಷ್ಟಿಯಿಂದಲೂ ಸಹ ಇದು ಸರಿ.

*ರೋಗ ಬರದಂತೆ ಜೀವಿಪುದು ಸರಿ ಬಂದಲ್ಲಿ ಬೇಡ*
*ಕಿರಿಕಿರಿ ಅದು ನಮ್ಮ ಗೆಳೆಯ ಇದು ಅರ್ಥವಾದರಿಲ್ಲ ಭಯ*

'ಆಯ್ತು, ರೋಗ– ನಮ್ಮ ಮಿತ್ರ ಎನ್ನುವುದನ್ನು ಒಪ್ಪೋಣ. ಆದರೆ, ನಿತ್ಯವೂ ಅವನ ಆಗಮನವಾದರೆ? ಸದಾ ಅನೇಕ ಮಿತ್ರರ ಧಾಳಿಯಾದರೆ?'

ಹಳ್ಳಿಯ ಕಡೆ ಒಂದು ಜಾಣ್ನುಡಿ ಇದೆ. ಮನೆಗೆ ಯಾರಾದರೂ ನೆಂಟರು ಆರು ತಿಂಗಳಿಗೊಮ್ಮೆ ಬಂದರೆ 'ಹಾಕ್ಮಣೆ'(ಮಣೆ ಹಾಕು) ಎನ್ನುತ್ತಾರಂತೆ, ಅವರು ಮೂರು ತಿಂಗಳಿಗೊಮ್ಮೆ ಬಂದರೆ 'ನೂಕ್ಮಣೆ' (ಮಣೆಯನ್ನು ನೂಕು) ಎನ್ನುತ್ತಾರಂತೆ, ಅವರೇ ತಿಂಗಳಿಗೊಮ್ಮೆ ಬಂದರೆ 'ಯಾಕ್ಮಣೆ' (ಯಾಕೆ ಮಣೆ?) ಎನ್ನುವರಂತೆ, ಇದು ಕಾಯಿಲೆಯೆಂಬ ಮಿತ್ರನ ವಿಚಾರಕ್ಕೂ ಸತ್ಯ. ವರ್ಷಕ್ಕೊಮ್ಮೆ ಜ್ವರ ಬಂದು ಸಂಗ್ರಹಿತ ಮಲವನ್ನೆಲ್ಲಾ ಸುಟ್ಟುಹಾಕಿದರೆ ಸಂತೋಷ. ಆದರೆ, ತಿಂಗಳಿ ಗೊಮ್ಮೆ ವಕ್ಕರಿಸಿದರೆ ಯಾರಿಗೇ ಆದರೂ ಬೇಸರ. ಹಾಗೆ ಆಗದಂತೆ ನೋಡಿಕೊಳ್ಳುವುದು ನಮ್ಮ ಕೈಯಲ್ಲಿಯೇ ಇದೆ.

**ಒಟ್ಟಿನಲ್ಲಿ ಇದೆಲ್ಲದರ ತಾತ್ಪರ್ಯ –ರೋಗ ನಮಗೆ ತೊಂದರೆ ಕೊಡಬೇಕೆಂಬ, ಸಾಯಿಸಬೇಕೆಂಬ ಉದ್ದೇಶದಿಂದ ಬಂದಿಲ್ಲ. ನಮಗೆ ಸಹಾಯ ಮಾಡಲೇ ಬಂದಿದೆ, ರಿಪೇರಿ ಮಾಡಲೇ ಬಂದಿದೆ. ಆದ್ದರಿಂದ ಅದು ನಮ್ಮ ಮಿತ್ರ**

*ಕೊಳೆಯು ಹೆಚ್ಚಿದರೆ ಅದು ಶರೀರಕೆ ಅಪಾಯ ಆಗ ಶರೀರವೇ*
*ಹೂಡುವ ಉಪಾಯ ಅದು ರೋಗವೆಂದು ನಮ್ಮ ಭಯ.*
*ಆದರೆ ನಿಜವಾಗಿ ಅದು ನಿಸರ್ಗ ಮಾಡುತಿಹ ಸಹಾಯ*
*ಕೊಳೆಯು ಒಳಗೇ ಉಳಿದರೆ ತಕ್ಷಣ ಸಾವು ನಿಸರ್ಗ ಅದನು*
*ತಪ್ಪಿಸಲು ತಂದಿಹುದು ಈ ನೋವು ಸಾವು– ನೋವುಗಳಲಿ*
*ಯಾವುದಾಗಬೇಕು ನಮ್ಮ ಆಯ್ಕೆ? ನೋವು ಇಂದಲ್ಲ ನಾಳೆ*
*ಹೋಗಬಹುದೆಂಬ ಬಯಕೆ ಆದ್ದರಿಂದ ರೋಗ ನಮ್ಮ ಗೆಳೆಯ*
*ಈ ಅರಿವಿನಿಂದ ಆಗುವುದು ಭಯ, ಲಯ.*
*Fever is our friend, Nature is so kind*
*It burns the toxin Collected within.*

– (ಮುಂದುವರೆಯುತ್ತದೆ)





## ಹರಳೂರಿನ ನೂತನ ಜಂಗಮಮಠದ ಉದ್ಘಾಟನಾ ಸಮಾರಂಭ

ಹರಳೂರಿನ ನೂತನ ಜಂಗಮ ಮಠ

ತುಮಕೂರು ತಾಲ್ಲೂಕಿನ ಹರಳೂರು ಗ್ರಾಮದಲ್ಲಿ ನೂತನ ಜಂಗಮ ಮಠದ ಉದ್ಘಾಟನಾ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದ ಸಿದ್ಧಗಂಗಾ ಮಠದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿ ಗಳವರು ಇಂದು ಪ್ರಪಂಚ ವೇಗವಾಗಿ ಸಾಗುತ್ತಿದೆ. ವಿಜ್ಞಾನ –ತಂತ್ರಜ್ಞಾನಗಳು ಅದಕ್ಕೆ ಪೋಷಕವಾಗಿವೆ. ಇಂದು ಜಗತ್ತು ಪುಟ್ಟಹಳ್ಳಿಯಂತಾಗಿದೆ. ನಾವೆಲ್ಲಾ ಒಟ್ಟಾಗಿ ಬಾಳ್ವೆ ಮಾಡ ಬೇಕಾಗಿದೆ. ಆಧುನಿಕ ತಂತ್ರಜ್ಞಾನದ ಫಲವಾಗಿ ಭೋಗ ಜೀವನಕ್ಕೆ ಹಲವಾರು ವಸ್ತುಗಳು ಕೊಡುಗೆಯಾಗಿ ಬಂದಿವೆ. ಆದರೆ ಇದನ್ನೇ ಪ್ರಗತಿ ಎಂದು ಹೇಳುವ ಹಾಗಿಲ್ಲ. ವಿಚಾರ ವಾದಿಗಳು ಮಾನವ ಸೃಷ್ಟಿಯಲ್ಲಿ ಕಿರೀಟಪ್ರಾಯನಾಗಿದ್ದಾನೆ. ಮಾನವನಾಗಿ ಬಾಳುವ ಕಲೆಯನ್ನು ಮರೆತು ಕ್ರೂರಿಯಾಗು ತ್ತಿದ್ದಾನೆ ಹೀಗೆ ಎರಡು ವಾದಗಳು ನಮ್ಮ ಮುಂದಿವೆ. ಇಂದು ಜಗತ್ತು ಮಾರಕಾಸ್ತ್ರಗಳ ಕಣಜವಾಗಿವೆ. ಒಂದೇ ಅಣುಬಾಂಬುನಿಂದ ಜಗತ್ತನ್ನೇ ನಾಶಮಾಡಬಹುದು. ಇದು ಸಾಧನೆಯೇನು?

ಇಂದು ಜಗತ್ತಿನಲ್ಲಿ ಒಂದೆಡೆ ವೈಭವೋಪೇತವಾದ ಜೀವನ ಮತ್ತೊಂದೆಡೆ ತಿನ್ನಲು ಅನ್ನವಿಲ್ಲ ಉಡಲು ಬಟ್ಟೆಯಿಲ್ಲ. ಈ ಜಗತ್ತನ್ನು, ದೇಶವನ್ನು ಅನೇಕ ಮಹಾರಾಜರು ಆಳಿಹೋಗಿದ್ದಾರೆ. ಅವರಾರನ್ನೂ ನಾವು ನೆನೆಯುವುದಿಲ್ಲ. ಧರ್ಮದೀಪಕರಾದ ಬುದ್ಧ, ಮಹಾವೀರ, ಕ್ರಿಸ್ತ, ಪೈಗಂಬರ್, ವಿವೇಕಾನಂದ, ಬಸವಣ್ಣ, ಗಾಂಧೀಜಿ ಮುಂತಾದ ಪುಣ್ಯ ಪುರುಷರನ್ನು ನೆನೆಯುತ್ತೇವೆ. ಇವರೆಲ್ಲರೂ ಜಗತ್ತಿಗೆ ಮಾನವ ಧರ್ಮ ಕೊಟ್ಟಿದ್ದಾರೆ. ಇವರೆಲ್ಲರೂ ಒಂದು ಸಂದೇಶ ಕೊಟ್ಟಿದ್ದಾರೆ. ಅದು ಪರಮಾತ್ಮ ಎನ್ನುವ ಚೈತನ್ಯ ಶಕ್ತಿ ಜಗತ್ತನ್ನು ವ್ಯಾಪಿಸಿದ್ದಾನೆ, ಅವನ ಒಲುಮೆಯನ್ನು ನಾವು ಗಳಿಸಿಕೊಳ್ಳಬೇಕು. ಪರಸ್ಪರ ಪ್ರೀತಿ ವಿಶ್ವಾಸದಿಂದ ಬಾಳುವುದೇ ಮಾನವ ಧರ್ಮ.

ಇಂದು ಸಮಾಜಕ್ಕೆ ಮಠಗಳ ಅವಶ್ಯಕತೆ ಇದೆ. ಗುರುವಿನ ಮಾರ್ಗದರ್ಶನಬೇಕಾಗಿದೆ. ಹಿಂದೆ ಧರ್ಮ ಪೀಠಗಳು ಜನ ಜೀವನವನ್ನು ಅರ್ಥಮಾಡಿಕೊಂಡು ಮಾರ್ಗ ದರ್ಶನ ನೀಡುತ್ತಿದ್ದವು. ಸಾಹಿತ್ಯ, ಸಂಸ್ಕೃತಿ ಕಲೆಯ ಪೋಷಕ ವಾಗಿದ್ದವು. ನ್ಯಾಯಾಂಗದ ಪೀಠಗಳು ಮಠಗಳಿಂದಲೇ ಸ್ಥಾಪಿತವಾದವುಗಳು, ಎಲ್ಲಿಯವರೆಗೆ ಸ್ವಾಮಿಗಳು ಚಾರಿತ್ರ್ಯ ಉಳ್ಳವರಾಗಿರುತ್ತಾರೋ ಅಲ್ಲಿಯವರೆಗೆ ಇವೆಲ್ಲಾ ಸಾಧ್ಯ. ಸದಾಚಾರ ಸಂಪನ್ನರಾಗಿ ವಿಚಾರವಂತರಾದರೆ ಎಲ್ಲಾ ರೀತಿಯ ಗೌರವ ಲಭಿಸುತ್ತದೆ. ಕಾವಿ ಲಾಂಛನ ಕಠಿಣತರವಾದದ್ದು. ಅದನ್ನು ಸರಿಯಾಗಿ ಪಾಲಿಸಿಕೊಂಡು ಹೋಗಬೇಕು ಎಂದು ಆಶೀರ್ವಚನ ನೀಡಿದರು.

ಸಮಾರಂಭದ ಉದ್ಘಾಟನೆ ಮಾಡಿದ ಶ್ರೀ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮೀಜಿ ಯವರು, ಆಶ್ರಮಗಳು ಒಬ್ಬ ವ್ಯಕ್ತಿಯ ಉದ್ದಾರಕ್ಕೆ ಕಾರಣ ವಾದರೆ, ಮಠಗಳು ಸಮಷ್ಟಿಯ ಉದ್ಧಾರದಲ್ಲಿ ತೊಡಗಿವೆ ಇಂದು ಜಗತ್ತಿನ ಅನೇಕ ರಾಷ್ಟ್ರಗಳನ್ನು ಒಂದೊಂದು ಕಾರಣದಿಂದ ಗುರುತಿಸಿದರೆ ಭಾರತವನ್ನು ಆಧ್ಯಾತ್ಮಿಕವಾಗಿ ಗುರುತಿಸಿಕೊಳ್ಳುತ್ತೇವೆ. ಈ ಆಧ್ಯಾತ್ಮ ಇಂದು ಜಗತ್ತಿಗೆ ಅತ್ಯವಶ್ಯಕವಾಗಿ ಬೇಕಾಗಿದೆ ಎಂದು ತಿಳಿಸಿದರು.

ಪರಮಪೂಜ್ಯರಿಂದ ಜಂಗಮ ಮಠದ ಉದ್ಘಾಟನೆ

ಅಖಿಲಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಶುಭನುಡಿಗಳನ್ನಾಡುತ್ತಾ ಮಠ ಸ್ಥಾವರ, ಚಟುವಟಿಕೆಗಳು ಜಂಗಮ, ಆಚಾರ, ವಿಚಾರ ಶೀಲವನ್ನು ಕಲಿಸುವ ಕೇಂದ್ರಗಳಾಗಿದ್ದವು. ಆದರೆ ಕೆಲವು ಮಠಗಳು ತಮ್ಮ ಮೂಲ ಧ್ಯೇಯವನ್ನೇ ಬಿಟ್ಟಿವೆ. ಆದರೆ ಶ್ರೀ ಸಿದ್ಧಗಂಗಾ ಮಠ ಮಠವಾಗಿಯೇ ಉಳಿದಿದೆ. ಕೆಲವು ದೇವಸ್ಥಾನಗಳು ಇಂದು ಪ್ರವೇಶಕ್ಕೆ ಅಡ್ಡೀಪಡಿಸುತ್ತಿವೆ. ತಮ್ಮಲ್ಲಿರುವ ಅಶ್ಲೀಲತೆಯನ್ನು ವ್ಯಭಿಚಾರವನ್ನು ಮುಚ್ಚಿ ಕೊಳ್ಳಲು ಧರ್ಮದ ವೇಷ ಹಾಕುತ್ತಿದ್ದಾರೆ. ಭಕ್ತಿ ಎಂದರೆ ಸ್ವಾತಂತ್ರ್ಯ ಅದು ಎಲ್ಲರಿಗೂ ಮುಕ್ತವಾಗಿರಬೇಕು. ಹಳ್ಳಿಗಳೂ ಇನ್ನೂ ಭಾರತದ ಸಂಸ್ಕೃತಿಯನ್ನು ಉಳಿಸಿಕೊಂಡು ಬೆಳೆಸಿ ಕೊಂಡು ಬರುತ್ತಿವೆ. ನಗರಗಳು ಇದಕ್ಕೆ ಅಪವಾದವಾಗಿವೆ. ಅಧಿಕಾರಶಾಯಿ ಭ್ರಷ್ಟಾಚಾರದಲ್ಲಿ ಮುಳುಗಿದೆ, ಇದನ್ನು ತಡೆಯದೇ ಹೋದರೆ ಈ ದೇಶ ಮತ್ತೆ ಪಾಳೆಗಾರರ ಸ್ವತ್ತಾಗುತ್ತದೆ. ಈ ದಿಶೆಯಲ್ಲಿ ಮಠಗಳು ಜನಜಾಗೃತಿ ಯುಂಟು ಮಾಡಬೇಕೆಂದು ಆಶಿಸಿದರು.

ಹೆಚ್.ವಿ. ವೀರಭದ್ರಯ್ಯನವರು ಸದಾಶಯ ನುಡಿಗಳನ್ನಾಡಿ ಅಹಂಕಾರ, ಮಮಕಾರ ತೊಡುದುಕೊಳ್ಳುವುದಕ್ಕೆ ಮಠಗಳು ಸಹಕಾರಿಯಾಗಿವೆ ಎಂದರು.

ನೂತನ ಮಠದ ಕರ್ತವ್ಯಗಳಿಗೆ ನಿಯೋಜಿತಗೊಂಡಿರುವ ಶ್ರೀ ಸೋಮಶೇಖರಸ್ವಾಮಿಗಳು, ಗುರುವಿನ ಧ್ಯಾನದಿಂದ ಎಲ್ಲವೂ ಲಭಿಸುತ್ತದೆ. ನಿಮ್ಮೆಲ್ಲರ ಸಹಕಾರದಿಂದ ಈ ಮಠದ ಕರ್ತವ್ಯಗಳನ್ನು ಮುನ್ನಡೆಸಿಕೊಂಡು ಹೋಗುತ್ತೇನೆಂದು ಭಕ್ತಿ ಸಮರ್ಪಣೆಯನ್ನು ಅರ್ಪಿಸಿದರು.

ಅಧ್ಯಕ್ಷತೆಯನ್ನು ವಹಿಸಿದ ಕನಕಪುರದ ದೇಗುಲಮಠದ ಮುಮ್ಮಡಿ ನಿರ್ವಾಣಸ್ವಾಮಿಗಳು, ದಕ್ಷಿಣಭಾರತದಲ್ಲಿ ಗುರುಮಲ್ಲೇಶ್ವರರು ಹಳ್ಳಿ ಹಳ್ಳಿಯಲ್ಲಿ ಮಠಗಳಿರಬೇಕೆಂದು ಬಯಸಿದವರು. ಅಂತೆಯೇ ಇಂದು ಶ್ರೀ ಸಿದ್ಧಗಂಗಾ ಮಠದ ಶ್ರೀಗಳು ಆ ಕಾರ್ಯಮಾಡುತ್ತಿದ್ದಾರೆ ಎಂದು ಅಪ್ಪಣೆ ಕೊಡಿಸಿದರು.

ನೂತನ ಮಠವನ್ನು ಕಟ್ಟಿಸಿ ಐದು ಎಕರೆ ಭೂಮಿಯನ್ನು ಕೊಡುಗೆಯಾಗಿ ನೀಡಿದ ಹರಳೂರಿನ ಲಿಂ॥ ಶ್ರೀ ಹೆಚ್. ಪುಟ್ಟಪ್ಪನವರ ಮಕ್ಕಳಾದ ಶ್ರೀ ಹೆಚ್.ಪಿ. ವಿಶ್ವನಾಥ್, ಶ್ರೀ ಹೆಚ್.ಪಿ. ಪ್ರಕಾಶ್, ಶ್ರೀ ಹೆಚ್.ಪಿ. ವಿಭುಶಂಕರ್ ಅವರನ್ನು ಪೂಜ್ಯರು ಸನ್ಮಾನಿಸಿದರು. ಈ ಸಂದರ್ಭದಲ್ಲಿ ಹರಳೂರು ಗ್ರಾಮದ ಶ್ರೀ ರುದ್ರದೇವರು ನೂತನ ಮಠದ ಆವರಣದಲ್ಲಿ ಒಂದು ಹಾಸ್ಟೆಲ್ ಕಟ್ಟಡ ನಿರ್ಮಿಸಿ ಕೊಡಲು ವಾಗ್ದಾನ ಮಾಡಿದರು. ಇವರನ್ನೂ ಕೂಡ ಸನ್ಮಾನಿಸಲಾಯಿತು.



ಶ್ರೀ ಮಠದ ನಿರ್ಮಾಣ ಹಾಗೂ ಭೂಮಿ ದಾನ ನೀಡಿದ ಲಿಂಗೈಕ್ಯ ಲಿಂ. ಶ್ರೀ ಹೆಚ್. ಪುಟ್ಟಪ್ಪನವರ ಮಕ್ಕಳು



ನೂತನ ಶ್ರೀಗಳವರೊಂದಿಗೆ ಭಕ್ತಾಧಿಗಳು

ಪ್ರಾರಂಭದಲ್ಲಿ ವಿದ್ವಾನ್ ಕೆ.ಎಸ್. ಶಿವನಂಜಯ್ಯನವರು ವೇದ ಗೋಷ ನಡೆಸಿಕೊಟ್ಟರು. ಶಾಲಾ ಮಕ್ಕಳು ಪ್ರಾರ್ಥನೆ ನಡೆಸಿ ಕೊಟ್ಟರು. ಶಾಲಾಮಕ್ಕಳು ಪ್ರಾರ್ಥನೆ ಸಲ್ಲಿಸಿದರು. ಶ್ರೀ ವೀರಪ್ಪದೇವರು ಸ್ವಾಗತಿಸಿದರು. ಶ್ರೀ ಕೆ.ಎಸ್. ಶಂಕರಯ್ಯನವರು ಪ್ರಸ್ತಾವಿಕ ನುಡಿ ಸಲ್ಲಿಸಿದರು. ಶ್ರೀ ವೀರಭದ್ರಯ್ಯನವರು ವಂದಿಸಿದರು. ಶ್ರೀ ಈಶ್ವರಯ್ಯನವರು ಕಾರ್ಯಕ್ರಮ ನಿರೂಪಿಸಿದರು. ಮಂಗಳದೊಂದಿಗೆ ಕಾರ್ಯಕ್ರಮ ಮುಗಿಯಿತು. ಸಮಸ್ತ ಸದ್ಭಕ್ತರಿಗೂ ಪ್ರಸಾದ ವ್ಯವಸ್ಥೆ ಮಾಡಲಾಗಿತ್ತು. ಸಹಸ್ರಾರು ಭಕ್ತಾದಿಗಳು ಸಮಾರಂಭದಲ್ಲಿ ಭಾಗವಹಿಸಿದ್ದರು. ವರದಿ : ಶ್ರೀ ಡಿ.ಎಸ್. ನಾಗರಾಜ್

### ಕಾಯಕ ಜೀವಿಯೇ ಶ್ರೀಮಂತ

ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ
ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿರ್ಪಳು
ಮಾರಯ್ಯಪ್ರಿಯ ಅಮರೇಶ್ವರಲಿಂಗದ ಸೇವೆಯುಳ್ಳನ್ನಕ್ಕ !

—ಆಯ್ದಕ್ಕಿ ಲಕ್ಕಮ್ಮ





## ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿ

## ಅನ್ನದಾನಕ್ಕೊಂದು ಅಪೂರ್ವ ಅವಕಾಶ

'ಅನ್ನಾದ್ಭವಂತಿ ಭೂತಾನಿ ಅಂದರೆ ಅನ್ನದಿಂದಲೇ ಸಕಲ ಜೀವಿಗಳ ಉತ್ಪತ್ತಿ.'
'ಅನ್ನದಾನಕ್ಕಿಂತ ಇನ್ನು ದಾನವಿಲ್ಲ'

ಶ್ರೀಮಠದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಪ್ರಾಂತ್ಯಗಳಿಂದ ಅಧ್ಯಯನಕ್ಕೆ ಮಕ್ಕಳು /ವಿದ್ಯಾರ್ಥಿಗಳ ಸಂಖ್ಯೆ 8000 ಮುಟ್ಟಿದೆ. ಇಲ್ಲಿ ಜಾತಿ ಭೇದವಿಲ್ಲ. ಪ್ರತಿದಿನ ಮಕ್ಕಳ ಪೋಷಕರು, ಪ್ರವಾಸಿಗರು ಶ್ರೀಕ್ಷೇತ್ರದ ಭಕ್ತರು ಸಹಸ್ರಾರು ಮಂದಿ ಆಗಮಿಸುತ್ತಾರೆ. ಎಲ್ಲರಿಗೂ ದಾಸೋಹ ನಡೆಯಬೇಕು. ಸ್ವಂತ ಆಸ್ತಿ ಬೆಂಬಲವಿಲ್ಲ. ಶ್ರೀ ಶ್ರೀಗಳವರ ಆತ್ಮಬಲ ಮತ್ತು ಭಕ್ತರ ಬೆಂಬಲದ ಮೇಲೆ ಈ ಕಾರ್ಯ ನಡೆಯುತ್ತಿದೆ. ಈ ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳುವ ಅಪೂರ್ವ ಅವಕಾಶವನ್ನು ಶ್ರೀಗಳವರು ಅನುಗ್ರಹಿಸಿದ್ದಾರೆ.

ಈ ಯೋಜನೆಯಂತೆ ಮಹನೀಯರು ಕೊನೆಯ ಪಕ್ಷ ರೂ. 2000/– ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹನಿಧಿಗೆ ಅರ್ಪಿಸಬೇಕು. ಇದನ್ನು ಶಾಶ್ವತ ನಿಧಿಯನ್ನಾಗಿ ಇಟ್ಟು (ಎಫ್.ಡಿ.) ಅದರ ಬಡ್ಡಿ ಹಣವನ್ನು ದಾಸೋಹಕ್ಕೆ ಬಳಸಲಾಗುವುದು.

**No.: DIT/E/80G** ಪ್ರಕಾರ ಆದಾಯ ತೆರಿಗೆ ವಿನಾಯಿತಿ ಇದೆ.

ಶ್ರೀಮಠದ ಭಕ್ತಮಂಡಳಿ ಪರವಾಗಿ

### ಈ ಪುಣ್ಯಕಾರ್ಯಫಲದ ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿಗೆ ಅರ್ಪಿಸಿರುವವರ ವಿಳಾಸ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ | ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|---|---|---|
| 3517. | ಶ್ರೀಮತಿ ಅಂಜನಮ್ಮ ಜಂಗುಪಾಳ್ಯಂ, ಅಲಸೂರು, ಬೆಂಗಳೂರು. | 1151.00 | 3528. | ಶ್ರೀ ಪ್ರಸನ್ನಮೂರ್ತಿ ಇಸ್ಕಾನ್ ಟೆಂಪಲ್ ಮುಂಭಾಗ, ರಾಜಾಜಿನಗರ, ಬೆಂಗಳೂರು. | 1001.00 |
| 3518. | ಶ್ರೀಮತಿ ಸೊಣ್ಣಮ್ಮ ಜಂಗುಪಾಳ್ಯಂ, ಅಲಸೂರು, ಬೆಂಗಳೂರು. | 1151.00 | 3529. | ಶ್ರೀಮತಿ ಡಿ.ಆರ್. ವೀರಮ್ಮ, ರಾಜಾಜಿನಗರ 4ನೇ ಬ್ಲಾಕ್, ಬೆಂಗಳೂರು. | 2001.00 |
| 3519. | ಶ್ರೀ ಮಹದೇವಯ್ಯ ಸರಸ್ವತಿಪುರಂ, ನಂದಿನಿ ಲೇಔಟ್, ಬೆಂಗಳೂರು. | 4000.00 | 3530. | ಶ್ರೀಮತಿ ಜ್ಯೋತಿ ಬಿ. ಪಂತ್, ಉಪನ್ಯಾಸಕರು, ಶ್ರೀ.ಸಿ.ಶಿ.ಮ.ವಿ., ಬಿ.ಹೆಚ್.ರಸ್ತೆ, ತುಮಕೂರು. | 4140.00 |
| 3520. | ಶ್ರೀಮತಿ ಜಯಮ್ಮ ಪುಟ್ಟರುದ್ರಪ್ಪ ಮತ್ತು ಮಕ್ಕಳು ನಗರ್ತರಪೇಟೆ, ದೊ.ಬ.ತಾ॥, ಬೆಂ.ಗ್ರಾ.ಜಿಲ್ಲೆ. | 5001.00 | 3531. | ಶ್ರೀ ಬಿ. ಬಸವರಾಜಯ್ಯ, ಹೆಗ್ಗುಂದ. ನೆಲಮಂಗಲ ತಾ॥, ಬೆಂಗಳೂರು ಗ್ರಾ.ಜಿ. | 2001.00 |
| 3521. | ಶ್ರೀಮತಿ ಲಿಂ. ಸಿದ್ಧಗಂಗಮ್ಮ ಅವರ ಸ್ಮರಣಾರ್ಥ ಅವರ ಮಕ್ಕಳು ಮಲ್ಲಪ್ಪನಹಳ್ಳಿ, ಅರೆಯೂರು ಅಂ., ತುಮಕೂರು ತಾ. | 10000.00 | 3532. | ಶ್ರೀ ಮನೀಶ್ ಸುಮಿತ್ರ ಚಂದ್ರಶೇಖರ್ ಮತ್ತು ಚಂದ್ರಶೇಖರ್ ಎಂ.ಸಿ.ಲೇಔಟ್, ವಿಜಯನಗರ, ಬೆಂಗಳೂರು. | 5001.00 |
| 3522. | ಶ್ರೀಮತಿ ಎಂ.ಎಸ್. ಮಂಜುಳ ಬಿನ್ ಶ್ರೀ ಎಂ.ಬಿ. ಸಿದ್ಧಪ್ಪ 2ನೇ ಕ್ರಾಸ್, ದಾವಣಗೆರೆ. | 2002.00 | 3533. | ಶ್ರೀಮತಿ ವೇಮಸೋಮಸುಂದರ್ ಬಸವನಗುಡಿ, ಬೆಂಗಳೂರು. | 5000.00 |
| 3523. | ಶ್ರೀಮತಿ ಸಾಕಮ್ಮ ಕೋಂ.ಲೇಟ್ ಕರಿಯಪ್ಪ ಕಾಕೋಳು, ಹೆಸರಘಟ್ಟ ಹೋ. ಬೆಂಗಳೂರು ಉ. | 2001.00 | 3534. | ಶ್ರೀ ಚಿಕ್ಕತಿಮ್ಮಯ್ಯ, 'ಡಿ'ಗ್ರೂಫ್ ನೌಕರ, ಶ್ರೀ.ಶಿ.ಗ್ರಾ.ಪ್ರೌ.ಶಾ. ಬ್ಯಾಲಕೆರೆ, ಮಾಗಡಿ ತಾ. | 1000.00 |
| 3524. | ಶ್ರೀ ಟಿ.ಟಿ. ಉಮಾಶಂಕರ್, ಸಹಶಿಕ್ಷಕರು, ಶ್ರೀ.ಶಾ.ಪ್ರೌ.ಶಾಲೆ, ತಂಡಗ, ತುರುವೇಕೆರೆ ತಾ. | 2001.00 | 3535. | ಶ್ರೀ ಬಿ.ಚಂದ್ರಶೇಖರಯ್ಯ, ವಕೀಲರು, ಪದ್ಮನಾಭನಗರ, ಬೆಂಗಳೂರು. | 5001.00 |
| 3525. | ಶ್ರೀ ಡಿ.ಎಸ್. ಶಿವಣ್ಣ, ಜೀವನಹಳ್ಳಿ, ಹಿರೇಚಂದ್ ಲೇಔಟ್, ಬೆಂಗಳೂರು. | 5001.00 | 3536. | ಶ್ರೀಮತಿ ಎ.ಆರ್. ಮಾಲಾ ರಾಜಾಜಿನಗರ 2ನೇಹಂತ, ಬೆಂಗಳೂರು. | 3001.00 |
| 3526. | ಶ್ರೀ ಕೆ.ಎಸ್. ಪರಮೇಶ್ವರಯ್ಯ, ನಿವೃತ್ತ ಅಧೀಕ್ಷಕರು, ಕಗ್ಗೆರೆ ಪೊ., ಕುಣಿಗಲ್ ತಾ॥ ತುಮಕೂರು ಜಿ. | 2001.00 | 3537. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು, ಸಿವಿಲ್ ವಿಭಾಗ, ಎಸ್.ಐ.ಟಿ., ತುಮಕೂರು. | 5000.00 |
| 3527. | ಕು॥ ಭಾಗ್ಯಮ್ಮ, ಸಹಶಿಕ್ಷಕರು, ಶ್ರೀ.ಸಿ.ಅಂ.ಮ.ಶಾಲೆ, ಶ್ರೀ ಸಿದ್ಧಗಂಗಾ ಮಠ. | 2001.00 | 3538 . | ಶ್ರೀ ರಾಜಶೇಖರಯ್ಯ, ಡೆಪ್ಯುಟಿ ಸೆಕ್ರಟರಿ, ಟಿಎಪಿಎಂಎಸ್ ಹೊಸಕೋಟೆ, ಬೆಂಗಳೂರು ಗ್ರಾ.ಜಿ. | 3000.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3539. | ಶ್ರೀ ಆರ್.ಸಿ. ಶೇಖರಯ್ಯ, ಕಾಫಿ ಪ್ಲಾಂಟರ್,<br>ರಾಯರಕೊಪ್ಪಲು, ಆಲೂರು ತಾ, ಹಾಸನ ಜಿ. | 2001.00 |
| 3540. | ಶ್ರೀ ಎಂ. ಬಸವರಾಜಯ್ಯ, ಸ.ಶಿ.<br>ಶ್ರೀ.ಗ.ಗ್ರಾ.ಸ.ಪ.ಪೂ.ಕಾ, ಗೂಳೂರು, ತುಮಕೂರು. | 2500.00 |
| 3541. | ಶ್ರೀ ಕೆ.ವಿ. ನಂಜಪ್ಪ,<br>ಕಣನೂರು, ಮಾಗಡಿ ತಾಲ್ಲೂಕು, ಬೆಂ.ಗ್ರಾ.ಜಿಲ್ಲೆ. | 2005.00 |
| 3542. | ಶ್ರೀ ಎಸ್. ಶಿವಪ್ಪ,<br>ಜಕ್ಕೇನಹಳ್ಳಿ, ಸಾಸಲು ಹೊ. ದೊ.ಬ.ತಾಲೂಕು. | 2001.00 |
| 3543. | ಶ್ರೀ ಕೆ.ಹೆಚ್. ಪರಮಶಿವಯ್ಯ,<br>ಶ್ರೀ.ಸಿ.ಸಂ.ಕಾಲೇಜು, ಬಿ.ಹೆಚ್.ರಸ್ತೆ, ತುಮಕೂರು. | 5001.00 |
| 3544. | ಡಾ|| ಜಿ.ಟಿ. ಹುಚ್ಚಪ್ಪ ಮತ್ತು ಶ್ರೀಮತಿ ಸರೋಜಮ್ಮ,<br>4ನೇ ಮುಖ್ಯರಸ್ತೆ, ಎಸ್.ಎಸ್. ಬಡಾವಣೆ, ತುಮಕೂರು.<br>(ಜಿ.ಸಿ. ರಾಜಣ್ಣ ಇವರ ಹೆಸರಿನಲ್ಲಿ ಬಸವಜಯಂತಿ ದಿವಸ) | 2500.00 |
| 3545. | ಶ್ರೀ ಜಿ.ಸಿ. ರಾಜಣ್ಣ, 4ನೇ ಮುಖ್ಯರಸ್ತೆ,<br>ಎಸ್.ಎಸ್. ಬಡಾವಣೆ, ತುಮಕೂರು.<br>(ಬಸವಜಯಂತಿ ದಿವಸ) | 5000.00 |
| 3545. | ಶ್ರೀ ಜಿ.ಸಿ. ರಾಜಣ್ಣ, (ಏಪ್ರಿಲ್ 4ರಂದು ದಾಸೋಹ)<br>ಡಿಟೋ ವಿಳಾಸ | 2500.00 |
| 3546. | ಶ್ರೀ ನವೀನ್ ಸಿ.ಎನ್. ಸಾಫ್ಟ್‌ವೇರ್ ಇಂಜಿನಿಯರ್,ಅಮೆರಿಕಾ<br>ಶ್ರೀಮತಿ ಜ್ಯೋತಿ ಕೋಂ ಸಿ.ಆರ್.ನಾಗರಾಜ್ ಇವರ ಹೆಸರಿನಲ್ಲಿ | 2500.00 |
| 3547. | ಶ್ರೀ ಹೆಚ್.ಎನ್. ನಿರಂಜನಾರಾಧ್ಯ<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು. | 1000.00 |
| 3548. | ಶ್ರೀಮತಿ ಹೇಮಲತಾ ಎನ್. ಪಾಟೀಲ್<br>4ನೇಕ್ರಾಸ್, ಜಯನಗರ, ತುಮಕೂರು. | 1000.00 |
| 3549. | ಶ್ರೀ ಟಿ.ಎಸ್. ನಾಗರಾಜ್, ಡೆಪ್ಯುಟಿ ಮ್ಯಾನೇಜರ್<br>ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು. | 3001.00 |
| 3550. | ಶ್ರೀಮತಿ ಕುಮುದ ರೇಣುಕಾಪ್ರಸಾದ್<br>ಆರ್.ವಿ.ಎಂ. ಬಡಾವಣೆ, ಬೆಂಗಳೂರು. | 1001.00 |
| 3551. | ಶ್ರೀ ಮಾಯಾಚಂದ್ರ<br>ಬಸವನಗುಡಿ, ಬೆಂಗಳೂರು. | 5001.00 |
| 3552. | ಶ್ರೀಮತಿ ಶ್ರೀ ಕೆ.ಆರ್. ಶೋಭ, ಎಂ.ಬಿ.ಬಿ.ಎಸ್.<br>ಬಿನ್ ರಾಜಣ್ಣ ಕೊರಟಗೆರೆ, ತುಮಕೂರು ತಾ. | 2001.00 |
| 3553. | ಶ್ರೀ ಎನ್. ಮರುಳಪ್ಪ, ಬಿ.ಇ., ಎಕ್ಸಿಕ್ಯೂಟಿವ್ ಇಂಜಿನಿಯರ್<br>ಜಯನಗರ, ಬೆಂಗಳೂರು. | 2001.00 |
| 3554. | ಅಧ್ಯಕ್ಷರು, ದಿಬ್ಬೂರು ವೀರಪ್ಪ ನಂಜಮ್ಮ ಎಂಡೊಮೆಂಟ್‌ಟ್ರಸ್ಟ್<br>ಜಯನಗರ, ಬೆಂಗಳೂರು. | 2500.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3555. | ಶ್ರೀ ಪ್ರಭುಶಂಕರ್, ಶಿವಣ್ಣ<br>ಬಸವೇಶ್ವರನಗರ 4ನೇ ಬ್ಲಾಕ್, ಬೆಂಗಳೂರು. | 2001.00 |
| 3556. | ಶ್ರೀಮತಿ ಜ್ಯೋತಿ ಬಿ. ಪಂಥ್, ಉಪನ್ಯಾಸಕರು,<br>ಶ್ರೀ.ಸಿ.ಶಿ.ಮ.ವಿ., ಬಿ.ಹೆಚ್.ರಸ್ತೆ, ತುಮಕೂರು. | 4140.00 |
| 3557. | ಶ್ರೀ ಎನ್. ಬಾಲಗಂಗಾಧರಯ್ಯ, ಇಂಜಿನಿಯರ್,<br>ಯು.ಎಸ್.ಎ., ಕೇರಾಪ್ ಕೆ. ಸಿದ್ಧಲಿಂಗಯ್ಯ<br>ತಟ್ಟೆಕೆರೆ, ನಿಡವಂದ ಪೊ. ನೆಲಮಂಗಲ ತಾ. ಬೆಂ.ಗ್ರಾ.ಜಿಲ್ಲೆ. | 2000.00 |
| 3558. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು,<br>ಸಿವಿಲ್ ಇಂ.ವಿಭಾಗ ಎಸ್.ಐ.ಟಿ. ತುಮಕೂರು. | 5000.00 |
| 3559. | ಶ್ರೀ ರಾಜಗುರು, ಉಪನ್ಯಾಸಕರು,<br>ಕೆಮಿಕಲ್ ಇಂ.ವಿಭಾಗ ಎಸ್.ಐ.ಟಿ. ತುಮಕೂರು. | 1100.00 |
| 3560. | ಶ್ರೀಮತಿ ವೇದಾಂಬ ಉಮಾಪತಿ<br>ಚಾಮರಾಜಪೇಟೆ, ಬೆಂಗಳೂರು. | 5000.00 |
| 3561. | ಶ್ರೀ ಸೋಮಶೇಖರಯ್ಯ,<br>ಪಿ.ಸಿ. ಬಡಾವಣೆ, ಕೋಲಾರ. | 2000.00 |
| 3562. | ಶ್ರೀ ಎನ್.ನಂಜುಂಡಪ್ಪ, 8ನೇ ಕ್ರಾಸ್,<br>ಎಸ್.ಐ.ಟಿ.ಬಡಾವಣೆ, ತುಮಕೂರು. | 2001.00 |
| 3563. | ಶ್ರೀ ಎನ್. ನಾಗಭೂಷಣ,<br>ಎಸ್.ಐ.ಟಿ.ಬಡಾವಣೆ, ತುಮಕೂರು. | 2001.00 |
| 3564. | ಶ್ರೀ ಹೆಚ್.ಎಸ್. ರುದ್ರೇಗೌಡಪಾಟೀಲ್, ಕಾಫಿ ಪ್ಲಾಂಟರ್,<br>ಹಾಲಸುಲಿಗೆ ಅಂ. ಸಕಲೇಶಪುರ ತಾ., ಹಾಸನ ಜಿ. | 1001.00 |
| 3565. | ಶ್ರೀಮತಿ ನಂಜಮ್ಮ ಕೋಂ. ಹೆಚ್.ಎಸ್. ರುದ್ರೇಗೌಡ<br>ಹಾಲಸುಲಿಗೆ ಅಂ. ಸಕಲೇಶಪುರ ತಾ., ಹಾಸನ ಜಿ. | 1001.00 |
| 3566. | ಶ್ರೀ ಎನ್.ಆರ್. ಶಂಕರಯ್ಯ, ಶಿಕ್ಷಕರು,<br>ಚೇತನ ಬಡಾವಣೆ, ಬಟವಾಡಿ, ತುಮಕೂರು | 5001.00 |
| 3567. | ಶ್ರೀಮತಿ ಪಾರ್ವತಮ್ಮ ಕೋಂ. ಲಿಂ.ಪಿ. ಸಿದ್ಧರಾಮಯ್ಯ<br>ರಾಜಾಜಿನಗರ 1ನೇ ಬ್ಲಾಕ್, ಬೆಂಗಳೂರು. | 9500.00 |
| 3568. | ಶ್ರೀ ಎನ್.ಲಕ್ಷ್ಮೀನರಸಪ್ಪ, 'ಡಿ' ಗ್ರೂಫ್ ನೌಕರ,<br>ಶ್ರೀ.ರಂ.ಗ್ರಾ.ಪ್ರೌ.ಶಾ. ನೇರಳೇಕೆರೆ, ಮಧುಗಿರಿ ತಾ. | 1000.00 |
| 3569. | ಶ್ರೀಮತಿ ಹೆಚ್.ಎಲ್. ಗಾಯತ್ರಿ ಕೋಂ. ಸಿ.ಪಿ. ನಾಗರಾಜ್<br>ಬಸವೇಶ್ವರ ಬಡಾವಣೆ, ಬಿಇಎಂಎಲ್ 3ನೇ ಸ್ಟೇಜ್,<br>ರಾಜರಾಜೇಶ್ವರಿನಗರ, ಬೆಂಗಳೂರು. | 2100.00 |
| 3570. | ಶ್ರೀ ಅಪ್ಪಣ್ಣಪ್ಪ,<br>ಮಹಾಲಕ್ಷ್ಮೀಪುರ 2ನೇ ಸ್ಟೇಜ್, ಬೆಂಗಳೂರು. | 5000.00 |
| 3571. | ಶ್ರೀ ಎಸ್.ಬಿ. ನಂಜುಂಡಯ್ಯ, ಬಿ.ಜಿ.ಭ್ರಮರಾಂಭಮ್ಮ<br>ಆಲಿಯಾಸ್ ಪುಷ್ಪಮ್ಮ ಮತ್ತು ಎಸ್. ಗಿರಿಜಮ್ಮ<br>ಎಂಡೋಮೆಂಟ್ ಟ್ರಸ್ಟ್(ರಿ.) ಬೆಂಗಳೂರು. | 5008.00 |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3572. | ಶ್ರೀ ಜಿ. ರಾಜಶೇಖರಯ್ಯ ಮತ್ತು ಆರ್. ಗಾಯತ್ರಿದೇವಿ,<br>ಜಯನಗರ 7ನೇ ಬ್ಲಾಕ್, ಬೆಂಗಳೂರು. | 5000.00 |
| 3573. | ಶ್ರೀ ಕೆ.ಎಂ. ಜಗದೀಶ್<br>ದುಮ್ಮಲೂರು 2ನೇ ಸ್ಟೇಜ್, ಬೆಂಗಳೂರು. | 2001.00 |
| 3574. | ಶ್ರೀ ಶಂಕರಾರಾಧ್ಯ,<br>ಕಾಟನ್‌ಪೇಟೆ, ಬೆಂಗಳೂರು. | 1000.00 |
| 3575. | ಶ್ರೀಮತಿ ಕೋಮಲಾದೇವಿ ಮಹದೇವಸ್ವಾಮಿ<br>ಲೀಲಾವತಿ ಬಡಾವಣೆ, ಮದ್ದೂರು, ಮಂಡ್ಯ ಜಿ. | 1001.00 |
| 3576. | ಶ್ರೀ ಎಲ್. ರೇಣುಕಪ್ಪ ಬಿನ್ ಲಿಂಗಣ್ಣ, ,<br>ಕೊಮ್ಮಘಟ್ಟ, ಕೆಂಗೇರಿ ಹೊ., ಬೆಂ.ದ.ತಾಲ್ಲೂಕು. | 1001.00 |
| 3577. | ಶ್ರೀ ಗಣೇಶ ಬಿ. ಮತ್ತು ಕುಟುಂಬದವರು,<br>ರಘುವನಹಳ್ಳಿ, ಕನಕಪುರ ರಸ್ತೆ, ಬೆಂಗಳೂರು ದ. | 5001.00 |
| 3578. | ಶ್ರೀ ಡಿ.ವಿ.ರುದ್ರಮೂರ್ತಿ ಬಿನ್ ಲೇಟ್ ವೀರಬದ್ರಪ್ಪ<br>ದೇವಗೆರೆ, ಕುಂಬಳಗೋಡು, ಬೆಂಗಳೂರು ಜಿ. | 1001.00 |
| 3579. | ಶ್ರೀಮತಿ ಭ್ರಮರಾಂಭ ವಿರೂಪಾಕ್ಷಯ್ಯ<br>ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು. | 1011.00 |
| 3580. | ಶ್ರೀ ಬಿ.ಡಿ. ವಿಶ್ವನಾಥ್, ಕಾಫಿ ಪ್ಲಾಂಟರ್,<br>ಬಾಳ್ಳುಪೇಟೆ, ಹಾಸನ ಜಿಲ್ಲೆ. | 2001.00 |
| 3581. | ಶ್ರೀ ವೈ. ಸಣ್ಣಹಾಲಪ್ಪ<br>ಹುಲಿಕುಂಟೆ, ದಾವಣಗೆರೆ ತಾಲ್ಲೂಕು. | 2001.00 |
| 3582. | ಶ್ರೀ ಎನ್. ಗೋವಿಂದಯ್ಯ, ಆಡಿಟ್ ಆಫೀಸರ್,<br>ಗೊರೂರು, ಹಾಸನ ತಾ., ಮತ್ತು ಜಿಲ್ಲೆ. | 1001.00 |
| 3583. | ಶ್ರೀ ಕೆ.ವೈ. ಜಗದೀಶ್,<br>ಪ್ರಶಾಂತ್‌ನಗರ, ದೇವರಾಯಪಟ್ಟಣ, ತುಮಕೂರು | 2005.00 |
| 3584. | ಶ್ರೀ ಕೆ. ಕೆಂಪಣ್ಣ , ಶಿಕ್ಷಕರು,<br>ಪುಲಮಾಚಿ, ತಾಡಿ ಅಂ., ಮಧುಗಿರಿ ತಾ. | 2001.00 |
| 3585. | ಶ್ರೀ ಟಿ.ಪಿ. ಸುಧೀರ್‌ಕುಮಾರ್ ಮತ್ತು ಚಂದ್ರಲತ<br>ವಿಜಯನಗರ, ಬೆಂಗಳೂರು. | 1001.00 |
| 3586. | ಶ್ರೀ ಕೆ.ಆರ್. ರಾಜಶೇಖರಯ್ಯ ಮತ್ತು ಬಸವರಾಜಮ್ಮ<br>ಕೋಡಿಹಳ್ಳಿ, ಕನಕಪುರ ತಾ|| ಬೆಂ.ಗ್ರಾ.ಜಿಲ್ಲೆ. | 2001.00 |
| 3587. | ಶ್ರೀ ಶಿವಕುಮಾರಸ್ವಾಮಿ ಮತ್ತು ಕುಟುಂಬವರ್ಗ<br>ಕಮರವಾಡಿ ಬನಹಳ್ಳಿ ಅಂ., ಚಾಮರಾಜನಗರ ತಾ. | 501.00 |
| 3588. | ಶ್ರೀ ಶಾಪ್ ಕುಮಾರ್, ಕಾಫಿ ಪ್ಲಾಂಟರ್<br>ಅರಕೆರೆ ಅಂ., ಸಕಲೇಶಪುರ ತಾಲ್ಲೂಕು. | 2008.00 |
| 3589. | ಶ್ರೀ ಜಿ.ಎಸ್. ಸಿದ್ಧಗಂಗಪ್ಪ<br>4ನೇ ಕ್ರಾಸ್, ಅಜಾದ್‌ನಗರ, ಬೆಂಗಳೂರು. | 1000.00 |
| 3590. | ಶ್ರೀ ಗೌಡಗೆರೆ ಮಹದೇವಪ್ಪ<br>ಬೆಳಕವಾಡಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿ. | 2001.00 |
| 3591. | ಶ್ರೀ ನಾರಾಯಣಸ್ವಾಮಿ ಮತ್ತು ಶ್ರೀ ಎಲ್ ಎಲ್ಲಾರೆಡ್ಡಿ<br>ರಾಮಸಾಗರ, ಮುತ್ತಿನಲ್ಲೂರು, ಆನೇಕಲ್ ತಾ. | 1250.00 |
| 3592. | ಶ್ರೀ ಪ್ರಕಾಶ್, ಪ್ರಾಂಶುಪಾಲರು,<br>ಶ್ರೀ.ವಿ.ಪ.ಪೂ.ಕಾ. ತುರುವೇಕೆರೆ, ತುಮಕೂರು. | 500.00 |
| 3593. | ಶ್ರೀ ಮಂಜೇಗೌಡ, ಉಪನ್ಯಾಸಕರು,<br>ಡಿಟೋ ಕಾಲೇಜು | 500.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3594. | ಶ್ರೀ ಬಿ.ವೈ. ತಿಮ್ಮೇಗೌಡ, ಉಪನ್ಯಾಸಕರು<br>ಡಿಟೋ ಕಾಲೇಜು | 500.00 |
| 3595. | ಶ್ರೀ ಎಂ.ಆರ್. ಪರಮೇಶ್ವರಸ್ವಾಮಿ, ಉಪನ್ಯಾಸಕರು,<br>ಡಿಟೋ ಕಾಲೇಜು | 500.00 |
| 3596. | ಶ್ರೀಮತಿ ಶಶಿಕಲಾ ದಕ್ಷಿಣಮೂರ್ತಿ ಮತ್ತು ಕುಟುಂಬವರ್ಗ<br>2ನೇ ಕ್ರಾಸ್, ಚೆನ್ನಬಸವೇಶ್ವರನಗರ, ತುಮಕೂರು. | 1000.00 |
| 3597. | ಶ್ರೀ ಚಂದ್ರಶೇಖರಯ್ಯ, ಉಪನ್ಯಾಸಕರು,<br>ಶ್ರೀ. ಸ್ವಾ.ವಿ.ಪ.ಪೂ.ಕಾಲೇಜು, ತುರುವೇಕೆರೆ. | 500.00 |
| 3598. | ಶ್ರೀಮತಿ ಬಿ.ಎಸ್. ವಿಮಲ, ಲೈಬ್ರರಿಯನ್,<br>ಡಿಟೋ ಕಾಲೇಜು | 500.00 |
| 3599. | ಶ್ರೀ ನರಸಿಂಹಮೂರ್ತಿ, ಪ್ರ.ದ.ಸ.<br>ಡಿಟೋ ಕಾಲೇಜು | 500.00 |
| 3600. | ಶ್ರೀ ಕೆ.ಎಸ್. ಪ್ರೇಮಕುಮಾರ್, ದ್ವಿ.ದ.ಸ.<br>ಡಿಟೋ ಕಾಲೇಜು | 500.00 |
| 3601. | ಶ್ರೀಮತಿ ಎಂ.ಎಸ್. ಸರೋಜ,<br>ಡಿಟೋ ಕಾಲೇಜು | 500.00 |
| 3602. | ಶ್ರೀಮತಿ ಕೆ. ಮಮತ<br>ಡಿಟೋ ಕಾಲೇಜು | 500.00 |
| 3603. | ಶ್ರೀ ಕೆ.ಹೆಚ್. ಶಾಂತಕುಮಾರ್<br>ಡಿಟೋ ಕಾಲೇಜು | 500.00 |
| 3604. | ಶ್ರೀ ಟಿ. ರಾಜಗೋಪಾಲ್<br>ಡಿಟೋ ಕಾಲೇಜು | 500.00 |
| 3605. | ಶ್ರೀ ಎಸ್.ಎನ್. ನಜೀರ್‌ಸಾಬ್<br>ಡಿಟೋ ಕಾಲೇಜು | 500.00 |
| 3606. | ಶ್ರೀ ಎನ್. ಮಲ್ಲೇಶಪ್ಪ<br>ಡಿಟೋ ಕಾಲೇಜು | 500.00 |
| 3607. | ಶ್ರೀ ಆರ್. ಬಸವರಾಜಯ್ಯ<br>ಬಸವೇಶ್ವರನಗರ, ಬೆಂಗಳೂರು. | 1,000.00 |
| 3608. | ಶ್ರೀ ಆರ್. ರಮೇಶ್ ಲಕ್ಷ್ಮಿ ಮತ್ತು ನಿವೇದಿತ<br>ಬಸವೇಶ್ವರನಗರ, ಬೆಂಗಳೂರು. | 2000.00 |
| 3609. | ಶ್ರೀಮತಿ ಮಂಗಳವಿರೂಪಾಕ್ಷ<br>ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ. | 5000.00 |
| 3610. | ಶ್ರೀ ಬಾಲಗಂಗಾಧರಯ್ಯ, ಇಂಜಿನಿಯರ್,<br>ತಟ್ಟೆಕೆರೆ, ನೆಲಮಂಗಲ ತಾ, ಬೆಂ.ಗ್ರಾ.ಜಿಲ್ಲೆ. | 1000.00 |
| 3611. | ಶ್ರೀಮತಿ ಸುಪ್ರಿಯಾ ಮಲ್ಲಿಕಾರ್ಜುನ<br>ಬಾಳ್ಳುಪೇಟೆ, ಸಕಲೇಶಪುರ ತಾ., ಹಾಸನ ಜಿ. | 2001.00 |
| 3612. | ಶ್ರೀ ಬಿ.ಹೆಚ್. ವಿರೂಪಾಕ್ಷಪ್ಪ ಮತ್ತು ಮಕ್ಕಳು, ಕಾಫಿ ಪ್ಲಾಂಟರ್<br>ರಾಯರಕೊಪ್ಪಲು, ಆಲೂರು, ಹಾಸನ ಜಿಲ್ಲೆ. | 5001.00 |
| 3613. | ಶ್ರೀಮತಿ ಜ್ಯೋತಿ ಬಿ. ಪಂಥ್, ಉಪನ್ಯಾಸಕರು,<br>ಶ್ರೀ.ಸಿ.ಶಿ.ಮ.ವಿದ್ಯಾಲಯ, ಬಿ.ಹೆಚ್.ರಸ್ತೆ, ತುಮಕೂರು. | 4140.00 |
| 3614. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು,<br>ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 5000.00 |
| 3615. | ಡಾ|| ಸಿ. ಸದಾಶಿವಯ್ಯ, ಉಪ-ಪ್ರಾಧ್ಯಾಪಕರು,<br>ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 5000.00 |
| 3616. | ಶ್ರೀ ಬಿ. ಪರ್ವತರಾಜ್,<br>ಕೋಲ್ಸ್ ರಸ್ತೆ, ಫ್ರೇಜರ್ ಟೌನ್, ಬೆಂಗಳೂರು. | 9000.00 |

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3617. | ಲಿಂ. ಸಿದ್ಧಲಿಂಗಮ್ಮನವರ ಸ್ಮರಣಾರ್ಥ ಶ್ರೀ ಎ.ಸಿ. ಶಂಭು<br>ಎಸ್.ಎಸ್. ಪುರಂ ಮುಖ್ಯರಸ್ತೆ, ತುಮಕೂರು. | 2500.00 |
| 3618. | ಶ್ರೀ ಹೆಚ್.ಎಂ. ತೀರ್ಥಮಲ್ಲೇಶ್, ಕಾಫಿ ಪ್ಲಾಂಟರ್,<br>ಮಲಸವಾರ, ಬೇಲೂರು ತಾ., ಹಾಸನ ಜಿಲ್ಲೆ. | 2222.00 |
| 3619. | ಶ್ರೀ ನೀಲಕಂಠಯ್ಯ ಎಸ್.<br>ಸುರಬನ್ನೇರ್, ಹೊನ್ನಾಳಿ ತಾ. ದಾವಣಗೆರೆ ಜಿ. | 1001.00 |
| 3620. | ಶ್ರೀ ಶ್ರೀಕಂಠಪ್ಪ, ಸೆಕ್ರೆಟರಿ<br>ರಾಮಕೃಷ್ಣನಗರ, ನಂದಿನಿ ಲೇಔಟ್, ಬೆಂಗಳೂರು. | 2001.00 |
| 3621. | ಶ್ರೀ ಜಿ. ತಿಮ್ಮಾರೆಡ್ಡಿ,<br>ವಾಲ್ಮೀಕಿನಗರ, ತುಮಕೂರು. | 3500.00 |
| 3622. | ಡಾ॥ ಸದಾಶಿವಯ್ಯ, ಉಪಪ್ರಾಧ್ಯಾಪಕರು,<br>ಸಿವಿಲ್ ಇಂ.ವಿಭಾಗ, ಎಸ್.ಐ.ಟಿ, ತುಮಕೂರು. | 5000.00 |
| 3623. | ಶ್ರೀ ಬಿ. ಚೆನ್ನಪ್ಪ, ಮಾಜಿ ಛೇರ್ಮನ್, ಚಂದ್ರವಾಡಿ ಅಂ.,<br>ಹುಲ್ಲಹಳ್ಳಿ, ನಂಜನಗೂಡು ತಾ., ಮೈಸೂರು ಜಿ. | 1000.00 |
| 3624. | ಶ್ರೀಮತಿ ಸರ್ವಮಂಗಳಮ್ಮ ಮತ್ತು ಮಕ್ಕಳು<br>9ನೇ ಇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು.<br>(ಲಿಂ.ಎಂ.ಬಿ. ಸದಾಶಿವಯ್ಯ, ಸೀತಕಲ್ಲು ಇವರ ಸ್ಮರಣಾರ್ಥ) | 5001.00 |
| 3625. | ಶ್ರೀ ಡಿ.ವಿ. ವೀರಯ್ಯ ಬಿನ್ ಶ್ರೀ ವೀರಯ್ಯ<br>ದೊಡ್ಡಗಂಗವಾಡಿ, ಬೆಂಗಳೂರು ಗ್ರಾ.ಜಿಲ್ಲೆ. | 1000.00 |
| 3626. | ಶ್ರೀ ವಿ. ವೀರಣ್ಣ<br>ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 2101.00 |
| 3627. | ಶ್ರೀ ಬಿ. ಮಹಾದೇವಯ್ಯ, 'ಡಿ' ಗ್ರೂಪ್ ನೌಕರರು,<br>ಶ್ರೀ.ಸಿ.ಗ್ರಾ. ಪ್ರೌ.ಶಾ., ಗುಡೇಮಾರನಹಳ್ಳಿ. | 1000.00 |
| 3628. | ಶ್ರೀ ಯು.ಎಂ. ತೀರ್ಥಮಲ್ಲೇಶ್,<br>ಮಲಸವಾರ ಅಂ., ಬೇಲೂರು ತಾ. ಹಾಸನ ಜಿ. | 5000.00 |
| 3629. | ಶ್ರೀ ನಾರಾಯಣಸ್ವಾಮಿ ಮತ್ತು ಶ್ರೀ ಎಸ್. ಎಲ್ಲಾರೆಡ್ಡಿ,<br>ರಾಮಸಾಗರ ಮುತ್ತನಲ್ಲೂರು ಅಂ., ಅನೇಕಲ್ ತಾ.,<br>ಆತಿಬೆಲೆ ಹೊ. ಬೆಂಗಳೂರು ನ.ಜಿಲ್ಲೆ. | 1050.00 |
| 3630. | ಶ್ರೀ ಪುಟ್ಟಮ್ಮ ಕೋಂ ಲಿಂ. ಕೃಷ್ಣರೆಡ್ಡಿ, ಮಾಜಿ ಅಧ್ಯಕ್ಷರು,<br>ಗ್ರಾ.ಪಂ., ಬೆಳ್ಳಂದೂರು, ವರ್ತೂರು., ಬೆಂ.ಗ್ರಾ | 1001.00 |
| 3631. | ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ,<br>8ನೇ ಮುಖ್ಯರಸ್ತೆ, ಅಶೋಕನಗರ, ತುಮಕೂರು. | 2001.00 |
| 3632. | ಶ್ರೀ ಜಿ.ಎಸ್. ಸಣ್ಣಮನಿ, ನಿ., ಡಿ.ವೈ.ಎಸ್.ಪಿ.<br>ವಿದ್ಯಾನಗರ, ಹುಬ್ಬಳ್ಳಿ | 5000.00 |
| 3633. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು,<br>ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 5000.00 |
| 3634. | ಶ್ರೀ ಪಟೇಲ್ ಹೆಚ್.ಆರ್. ಪ್ರಸಾದ್<br>ಹಾಲಸುಲಿಗೆ ಅಂ., ಸಕಲೇಶಪುರ ತಾ., | 1010.00 |
| 3635. | ಶ್ರೀ ಎಂ.ಸಿ. ಲಿಂಗಪ್ಪ, ಸಹ-ಶಿಕ್ಷಕರು,<br>ಶ್ರೀ. ಮಂ.ಬಾ.ಪ್ರೌ.ಶಾ., ನೆಲಮಂಗಲ, ಬೆಂ.ಗ್ರಾ | 2001.00 |
| 3636. | ಶ್ರೀ ಚಂದ್ರಶೇಖರಯ್ಯ ಬಿನ್. ಶ್ರೀ ಪುಟ್ಟವೀರಯ್ಯ<br>ಮಾರನಾಯಕನಪಾಳ್ಯ, ದೇವರಾಯಪಟ್ಟಣ ಅಂ.<br>ತುಮಕೂರು | 1000.00 |
| 3637. | ಶ್ರೀ ಸೋಮಸುಂದ್ರಮೂರ್ತಿ, ಅರೀಸಂದ್ರ,<br>ರಾಮನಗರ ತಾ., ಬೆಂಗಳೂರು ಗ್ರಾ.ಜಿಲ್ಲೆ. | 1001.00 |
| 3638. | ಶ್ರೀ ಸಿ. ಚಿಕ್ಕತಿಮ್ಮಯ್ಯ 'ಡಿ'ಗ್ರೂಪ್ ನೌಕರರು<br>ಶ್ರೀ.ಶಿ.ಗ್ರಾ.ಪ್ರೌ.ಶಾಲೆ., ಬ್ಯಾಲಕೆರೆ, ಮಾಗಡಿ ತಾ., | 1000.00 |
| 3639. | ಶ್ರೀ ಟಿ.ಎನ್. ಮಂಜುನಾಥ್, ದ್ವಿ.ದ.ಸ. ಶ್ರೀ.ಬ.ಗ್ರಾ.ಪ್ರೌ.ಶಾ.,<br>ದೊಡ್ಡಸಾಗ್ಗೆರೆ, ಕೊರಟಗೆರೆ ತಾ., | 2001.00 |
| 3640. | ಡಾ॥ ಮಂಜುನಾಥ್, ಎಂಐಟಿಆರ್<br>ಚಯ್ಯಾಪುಮ್, ಥೈಲಾಂಡ್. | 4000.00 |
| 3641. | ಶ್ರೀ ಮುರುಳೀಧರ ಎನ್.ವಿ. ವ್ಯವಸ್ಥಾಪಕರು,<br>ಎಸ್.ಬಿ.ಎಂ. ಮುಖ್ಯಕಛೇರಿ, ಬೆಂಗಳೂರು. | 2001.00 |
| 3642. | ಶ್ರೀಮತಿ ಪಂಕಜ, ಸಹಶಿಕ್ಷಕರು, ಶ್ರೀ.ಸಿ.ಸಂ.ಪ.ಪೂ.ಕಾಲೇಜು<br>ಬೂದಿಗೆರೆ, ದೇವನಹಳ್ಳಿ ತಾ., | 1000.00 |
| 3643. | ಶ್ರೀ ಜಯಣ್ಣ, ಸಹ-ಶಿಕ್ಷಕರು,<br>ಡಿಟ್ಟೋ ಶಾಲೆ. | 1001.00 |
| 3644. | ಶ್ರೀ ಮಾದೇಶ, ದ್ವಿ.ದ.ಸ.<br>ಡಿಟ್ಟೋ ಶಾಲೆ. | 2001.00 |
| 3645. | ಪ್ರಾಂಶುಪಾಲರು ಮತ್ತು ಸ್ಟಾಫ್ ಮೆಂಬರ್ಸ್,<br>ಶ್ರೀ ಸಿದ್ಧಗಂಗಾ ಪ.ಪೂ.ಬಾಲಕಿಯರ ಕಾಲೇಜು.,<br>ಬಿ.ಹೆಚ್. ರಸ್ತೆ, ತುಮಕೂರು. | 5001.00 |
| 3646. | ಶ್ರೀ ಟಿ.ಎನ್. ಮಧು, ಪ್ರೊಪ್ರೈಟರ್, ಮೆ। ಕಾರ್ಡ್ ಎಂ.ಎಂಟರ್<br>ಪ್ರೈಸಸ್, ಗೋವಿಂದರಾಜನಗರ, ಬೆಂಗಳೂರು. | 5001.00 |
| 3647. | ಶ್ರೀ ಸಿ. ಜಯರಾಮಯ್ಯ, ಪ್ರೊಪ್ರೈಟರ್, ಕೋ-ಆರ್ಡ್-ಟೆಕ್<br>ಟೂಲ್ಸ್, ಬನ್ನೇರುಘಟ್ಟ ಮುಖ್ಯರಸ್ತೆ, ಬೆಂಗಳೂರು. | 2001.00 |
| 3648. | ಪ್ರೊ. ಶ್ರೀ ಹೆಚ್.ಎಸ್. ರೇಣುಕಾನಂದ,<br>ಸ್ಯಾಟಲೈಟ್ ಟೌನ್, ಕೆಂಗೇರಿ, ಬೆಂಗಳೂರು. | 2005.00 |
| 3649. | ಶ್ರೀ ಕೆ.ಎಂ. ಗವಿಸಿದ್ಧಯ್ಯಸ್ವಾಮಿ, ನಿ.ಶಿಕ್ಷಕರು,<br>ಕೆ.ಎಂ.ಎಸ್.ಶಾಲೆ, ಪಟೇಲ್ ನಗರ, ಬಳ್ಳಾರಿ. | 2005.00 |
| 3650. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಹಿರಿಯ ಉಪನ್ಯಾಸಕರು,<br>ಎಸ್.ಐ.ಟಿ. ಬಿ.ಹೆಚ್. ರಸ್ತೆ, ತುಮಕೂರು. | 8500.00 |
| 3651. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು, ಸಿವಿಲ್ ಇಂ. ವಿಭಾಗ<br>ಎಸ್.ಐ.ಟಿ. ಬಿ.ಹೆಚ್. ರಸ್ತೆ, ತುಮಕೂರು. | 5000.00 |
| 3652. | ಡಾ॥ ಮಹೇಶ್ ಪಾಟೀಲ್<br>ಯೂನಿವರ್ಸಿಟಿ ರಸ್ತೆ, ನಿರ್ಮಲನಗರ, ಧಾರವಾಡ. | 1001.00 |
| 3653. | ಶ್ರೀ ಗೌರಮ್ಮಣ್ಣ ಕೋಂ. ಕೆ.ಎಂ. ರೇವಣಸಿದ್ಧಯ್ಯ, ನಿ. ಪ್ರಾಂ.<br>12ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು. | 2000.00 |
| 3654. | ಶ್ರೀಮತಿ ಹೊನ್ನಮ್ಮನವರು ಲಿಂ. ಸದಾಶಿವಯ್ಯನವರ ಪತ್ನಿ<br>ಹುಲ್ಕುಂಟೆ ಅಂ., ದೊಡ್ಡಬಳ್ಳಾಪುರ ತಾ., | 2002.00 |
| 3655. | ಶ್ರೀಮತಿ ಎ.ಎಂ. ಸುಶೀಲಮ್ಮ, ದ್ವಿ.ದ.ಸ.<br>ಶ್ರೀ.ಜ.ಗ್ರಾ.ಪ್ರೌ.ಶಾಲೆ., ನಿಟ್ರಹಳ್ಳಿ, ಮಧುಗಿರಿ ತಾ. | 1002.00 |
| 3656. | ಶ್ರೀಮತಿ ಅಹಲ್ಯ ಕೋಂ. ಜೆ.ಪಿ. ವೀರಭದ್ರಪ್ಪ,<br>ಹೊಸಕೋಟೆ, ಬೆಂಗಳೂರು ಗ್ರಾ.ಜಿಲ್ಲೆ. | 2001.00 |
| 3657. | ಶ್ರೀ ಜೆ.ಪಿ. ವೀರಭದ್ರಪ್ಪ,<br>ಹೊಸಕೋಟೆ, ಬೆಂಗಳೂರು ಗ್ರಾ.ಜಿಲ್ಲೆ. | 1001.00 |

(ಮುಂದುವರಿಯುತ್ತದೆ) *

l No. 17139/69 "Siddaganga" Monthly - Postal Reg. No. KA/SK/TMR/385/2006-08



ಶ್ರೀ ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜಿನಲ್ಲಿ ಸಂಸ್ಕೃತಿ ೨೦೦೭-೦೮ ರ ಸಾಂಸ್ಕೃತಿಕ ಸ್ಪರ್ಧೆಗಳ ಉದ್ಘಾಟನೆಯನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಕವಿ ಹಾಗೂ ನಾಟಕಕಾರರಾದ ಡಾ. ಚಂದ್ರಶೇಖರ ಕಂಬಾರ ಅವರು ಉದ್ಘಾಟಿಸಿದರು.



ಶ್ರೀಮಠದಲ್ಲಿ ಜುಲೈ ೨೮ ರಂದು ಸಮಾರಂಭದಲ್ಲಿ ಉನ್ನತ ಶಿಕ್ಷಣ ಸಚಿವ ಶ್ರೀ ಡಿ.ಹೆಚ್. ಶಂಕರಮೂರ್ತಿಯವರು ಹೊಸದಾಗಿ ಪ್ರಾರಂಭವಾಗಿರುವ ಕನ್ನಡ ಪಂಡಿತ ಬಿ.ಎ. ಇಂಟಿಗ್ರೇಟೆಡ್ ಕೋರ್ಸ್‌ನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಚಿವ ಶ್ರೀ ಬಸವರಾಜ ಹೊರಟ್ಟಿ ಅವರು ಉಪಸ್ಥಿತರಿದ್ದರು.



ತುಮಕೂರಿನಲ್ಲಿರುವ ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜಿನ ೨೦೦೬-೦೭ ರ ಕಾಲೇಜು ದಿನಾಚರಣೆ ಸಮಾರಂಭವನ್ನು ಪೂಜ್ಯ ಕಿರಿಯ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪ್ರಾಂಶುಪಾಲರಾದ ಶ್ರೀ ಡೇವಿಡ್ ಬಾಂಜಿ, ಕೈಗಾರಿಕೋದ್ಯಮಿಗಳಾದ ಶ್ರೀ ಎಸ್.ಆರ್. ಪ್ರಭು ಮತ್ತು ಶ್ರೀ ಅನಂತಪದ್ಮನಾಭವರು ಉಪಸ್ಥಿತರಿದ್ದರು.



ತುಮಕೂರಿನ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ೨೦೦೭-೦೮ ನೇ ಸಾಲಿನ ವಾರ್ಷಿಕ ಚಟುವಟಿಕೆಯ ಉದ್ಘಾಟನೆ ಹಾಗೂ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.



ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ೨೦೦೭-೦೮ ನೇ ಸಾಲಿನ ವಿದ್ಯಾರ್ಥಿ ಸಂಘದ ಉದ್ಘಾಟನೆಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ತುಮಕೂರು ತಾ॥ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಮುಖ್ಯ ಶಿಕ್ಷಕರು ಉಪಸ್ಥಿತರಿದ್ದರು



ತುಮಕೂರು ತಾಲ್ಲೂಕು ಊರ್ಡಿಗೆರೆ ಹೋಬಳಿಯ ವಲಯ ಮಟ್ಟದ ಕ್ರೀಡಾಕೂಟದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ವಿದ್ಯಾರ್ಥಿಗಳು ವಿವಿಧ ಕ್ರೀಡೆಗಳಲ್ಲಿ ಭಾಗವಹಿಸಿ ಪ್ರಥಮ ಸ್ಥಾನಗಳಿಸಿದ್ದಾರೆ. ವಿಜೇತ ವಿದ್ಯಾರ್ಥಿಗಳೊಂದಿಗೆ ಶಾಲೆಯ ಮುಖ್ಯೋಪಾಧ್ಯಾಯರು ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087